CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮಾರ್ಚ್ ೧೮, ೨೦೦೪ (ಫಾಲ್ಗುಣ ೨೮, ಶಕ ವರ್ಷ ೧೯೨೫) | ಸಂಚಿಕೆ ೧೨ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆ ಅಡಿ ನಿಯಂತ್ರಣಾಧಿಕಾರಿಗಳವರ ನ್ಯಾಯಾಲಯ, ಚಿಕ್ಕಮಗಳೂರು**

**ಸಂಖ್ಯೆ:ಪಿಜಿಎ:ಎಸ್‌ಆರ್-38, 2003-04, ದಿನಾಂಕ:19ನೇ ಜನವರಿ, 2004**

**ಅರ್ಜಿದಾರರು:** ಶ್ರೀಮತಿ ರಾಧಮ್ಮ ಕೋಂ: ಕೃಷ್ಣಪ್ಪ, ನವೀನ್ ಪ್ರಾವಿಜನ್ ಸ್ಟೋರ್ಸ್ ಹಿಂಭಾಗ, ಗೋವರ್ಧನಗಿರಿ ರಸ್ತೆ, ಅರಸೀಕೆರೆ.

ವಿರುದ್ಧ

**ಪ್ರತಿವಾದಿಗಳು:** ವಿಭಾಗೀಯ ನಿಯಂತ್ರಣಾಧಿಕಾರಿ, ಕೆ.ಎಸ್.ಆರ್.ಟಿ.ಸಿ. ಚಿಕ್ಕಮಗಳೂರು ವಿಭಾಗ, ಬಾರ್‌ಲೈನ್ ರಸ್ತೆ, ಚಿಕ್ಕಮಗಳೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿ ಅರ್ಜಿಯಲ್ಲಿ ಮೃತ ಕೃಷ್ಣಪ್ಪ ಇವರು ಪ್ರತಿವಾದಿ ಸಂಸ್ಥೆಯಲ್ಲಿ ದಿನಾಂಕ:17.01.1989ರಂದು ಕೆಲಸಕ್ಕೆ ಸೇರಿದ್ದು ದಿನಾಂಕ:15.03.2002ರಲ್ಲಿ ಕರ್ತವ್ಯನಿರತರಾಗಿದ್ದಾಗ ಮೃತರಾಗಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯಾ ಬರಬೇಕಾದ ಉಪಧನವನ್ನು ಕೊಡಿಸಿಕೊಡುವಂತೆ ದಿನಾಂಕ: 29.09.03ರಲ್ಲಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಸದರಿ ದಾವೆಯ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿದಾರರನ್ನು ಹೊರತುಪಡಿಸಿ ಬೇರೆ ಯಾರಾದರೂ, ಮೃತರಿಗೆ ಸಂಬಂಧಪಟ್ಟ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದೆ. 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಿದೆ. ಅವಧಿ ಮೀರಿಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ಬಿ. ಕಾಳಯ್ಯ**
ಸಹಾಯಕ ಕಾರ್ಮಿಕ ಆಯುಕ್ತರು,
ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

ಪಿ.ಆರ್.229

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ:ಕಾನಪ:ಪ್ರ:, ಎಫ್2/2004, ದಿನಾಂಕ:28ನೇ ಜನವರಿ, 2004**

**ಅರ್ಜಿದಾರರು:**

1. ಶ್ರೀಮತಿ ರೇಣುಕಾಬಾಯಿ
2. ಮಂಜುಳ
3. ಬಾಲಾಜಿ
4. ಭರತ್
5. ಲಕ್ಷ್ಮಿಬಾಯಿ

ಎಲ್ಲರೂ ವಾಸ: ಚಿತ್ರದುರ್ಗ.

ವಿರುದ್ಧ

**ಪ್ರತಿವಾದಿಗಳು:**

1. ಶ್ರೀ ಜಿ.ಕೆ. ಕರಿಯಪ್ಪ S/o ನಾಗಪ್ಪ ಆಟೋರಿಕ್ಷಾ ಮಾಲೀಕರು, ಚಿತ್ರದುರ್ಗ.
2. ಶಾಖಾ ವ್ಯವಸ್ಥಾಪಕರು, ಯುನೈಟೆಡ್ ಇಂ. ಇನ್‌ಶ್ಯೂರೆನ್ಸ್ ಕಂಪನಿ ಲಿ. ಚಿತ್ರದುರ್ಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ: (1) ರೇಣುಕಾಬಾಯಿ (2) ಮಂಜುಳ (3) ಬಾಲಾಜಿ (4) ಭರತ್ (5) ಲಕ್ಷ್ಮಿಬಾಯಿ ಇವರು, ತಾವು ಮೃತ ಚಂದ್ರನಾಯ್ಕ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಚಂದ್ರನಾಯ್ಕ ಇವರು ಒಂದನೇ ಪ್ರತಿವಾದಿಗಳಾದ ಜಿ.ಕೆ. ಕರಿಯಪ್ಪ ಇವರಲ್ಲಿ ರಿಕ್ಷಾ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.230

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ:ಕಾನಪ:ಪ್ರ:356/2003, ದಿನಾಂಕ:16ನೇ ಡಿಸೆಂಬರ್, 2003**

**ಅರ್ಜಿದಾರರು:**
1. ಎಸ್. ಶಂಕ್ರಮ್ಮ
2. ನಂಜುಂಡೇಶ್ವರ
3. ಎಂ. ರಾಘವೇಂದ್ರ
   ವಾಸ: ಬಬ್ಬೂರು.

**ವಿರುದ್ಧ**

**ಪ್ರತಿವಾದಿಗಳು:**
1. ಆಪರೇಶನ್ ಎಕ್ಸಿಕ್ಯೂಟೀವ್
   ಲಾರಿ ಮಾಲೀಕರು, ಬೆಂಗಳೂರು.
2. ನ್ಯೂ ಇಂ. ಅಶೂರೆನ್ಸ್ ಕಂ.ಲಿ. ದಾವಣಗೆರೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: ಶಂಕ್ರಮ್ಮ ಹಾಗೂ ಇತರರು ಮೃತ ಮಲ್ಲಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಲ್ಲಪ್ಪ ಇವರು ಒಂದನೇ ಪ್ರತಿವಾದಿಗಳಾದ ಆಪರೇಷನ್ ಎಕ್ಸಿಕ್ಯೂಟೀವ್, ಗಾದಿಗ್ ಪಾಟೀಲ್ ಟ್ರಾನ್ಸ್‌ಪೋರ್ಟ್ ಇವರಲ್ಲಿ ಲೋಡರ್ ಅನ್‌ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.231

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ:ಕಾಅಚಿ/ಕಾನಪ/ಇತರೇ-9/2003, ದಿನಾಂಕ:16ನೇ ಡಿಸೆಂಬರ್, 2003**

**ಅರ್ಜಿದಾರರು:**
1. ಕೋರ್ಲ ಪಾಲಯ್ಯ
   Dead by L.R. Palamma
   W/o ಕೋರ್ಲ ಪಾಲಯ್ಯ
   ದೊಡ್ಡೇರಿ ರೆಡ್ಡಿಹಳ್ಳಿ

**ವಿರುದ್ಧ**

**ಪ್ರತಿವಾದಿಗಳು:**
1. ಎಂ. ತಿಪ್ಪೇಸ್ವಾಮಿ,
   ವಾಹನ ಮಾಲೀಕರು,
   ದೊಡ್ಡೇರಿ ರೆಡ್ಡಿಹಳ್ಳಿ
2. ಓರಿಯಂಟಲ್ ಇನ್‌ಶೂರೆನ್ಸ್ ಕಂ.ಲಿ. ದಾವಣಗೆರೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ: ಕೋರ್ಲ ಪಾಲಯ್ಯ W/o ಪಾಲಮ್ಮ ಇವರು, ತಾವು ಮೃತ ಕೋರ್ಲಪಾಲಯ್ಯ ಇವರ ಹೆಂಡತಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೋರ್ಲಪಾಲಯ್ಯ ಇವರು ಒಂದನೇ ಪ್ರತಿವಾದಿಗಳಾದ ಎಂ. ತಿಪ್ಪೇಸ್ವಾಮಿ ಇವರಲ್ಲಿ "ಕೂಲಿ" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ

ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.232

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ:ಕಾನಪ:ಪ್ರ:386/03, ದಿನಾಂಕ:20ನೇ ಡಿಸೆಂಬರ್, 2003**

**ಅರ್ಜಿದಾರರು:**
1. ಗೋವಿಂದಮ್ಮ
2. ಪುರುಶೋತ್ತಮ ಗೌಡ
   ವಾಸ: ಪುದೂರು ಗ್ರಾಮ, ಕರ್ನೂಲ್.

**ವಿರುದ್ಧ**

**ಪ್ರತಿವಾದಿಗಳು:**
1. ಕಿರಣ್‌ಕುಮಾರ್
   ವಾಹನ ಮಾಲೀಕರು, ಹಾವೇರಿ.
2. ಓರಿಯಂಟಲ್ ಇನ್‌ಶೂರೆನ್ಸ್ ಕಂ.ಲಿ. ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: ಗೋವಿಂದಮ್ಮ ಇತರರು ಇವರು, ತಾವು ಮೃತ ಪಾಂಡುರಂಗಗೌಡ ಇವರ ತಂದೆ ಮತ್ತು ತಮ್ಮ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪಾಂಡುರಂಗಗೌಡ ಇವರು ಒಂದನೇ ಪ್ರತಿವಾದಿಗಳಾದ ಕಿರಣ್‌ಕುಮಾರ್ ಇವರಲ್ಲಿ ಲೋಡರ್‌ಅನ್‌ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.233

**PROCEEDINGS OF THE DISTRICT & SESSIONS COURT, GULBARGA**
**(Competent authority, Under Rule 4 of Noterial Rules 1956)**
**NOTICE DATED:6/7TH NOVEMBER, 2003**

**Sub:** Appointment of Addl. Notary for Aland Taluk

**Ref:**
1. Government of Karnataka Order No. LAW 98.LCL.2003 Dated:29.08.2003 creating additional Posts of Notary for Aland Taluka.
2. Government Letter No. LAW 98 LCL 2003 dated:29.09.2003 to take necessary steps for appointment of Additional Notary.
3. This office Notification No.1/03 dated:10.10.2003 calling memorials from intending Advocates.
4. Office note dated:05.11.2003 and orders passed thereon.

It is brought to the notice of public that the following Advocates have submitted their Memorial for appointment of additional notary for Aland Taluk in Gulbarga District.

**Name of the Advocates**
1. Sri Sureshchandra Patil
2. Sri Siddharudh Munnolli
3. Sri Purushottam Apte
4. Sri Abhimanyu Tole
5. Sri S.S. Chinchure

Therefore, persons having any objections for appointment of above Advocates as additional Notary for Aland Taluk may submit their objection to the undersigned within 15 days from the date of publication of notice in the Official Gazette.

**SHEKHARAGOUDA PATIL**
Prl. District & Sessions Judge,
Gulbarga.

PR-234

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಲಿಂಗಪ್ಪ ಶಂಕರಪ್ಪ ಕೋಳಿವಾಡ, ಫಾರ್ಮಾಸಿಸ್ಟ್, ಇವರ ದೀರ್ಘಾವಧಿ ಅನಧಿಕೃತ ಗೈರುಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ: ಸಿಆರ್ಎಂ(2)36:92-93,
2. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ:11.01.93
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ:ಡಿಪಿಎನ್(8)ಸಿಆರ್:14:92-93, ದಿನಾಂಕ:03.04.02.
4. ವಿಚಾರಣಾ ವರದಿಯ ಸಂ:ವಿಜ:ಮುಜಾಅ:ಎನ್‌ಬಿ:5:02-03, ದಿನಾಂಕ:16.08.03.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂ:ಡಿಪಿಎನ್(8) ಸಿಆರ್14:92-93, ದಿನಾಂಕ:16.09.03.
6. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ:16.10.03.

**ಪ್ರಸ್ತಾವನೆ:**

ಶ್ರೀ ಲಿಂಗಪ್ಪ ಶಂಕರಪ್ಪ ಕೋಳಿವಾಡ ಫಾರ್ಮಾಸಿಸ್ಟ್, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಕುರ್ನಾಡು, ದಕ್ಷಿಣ ಕನ್ನಡ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ:02.01.81 ರಿಂದ 05.08.93 ರವರೆಗೆ ದೀರ್ಘಾವಧಿ ಅನಧಿಕೃತ ಗೈರು ಹಾಜರಾಗಿದ್ದು ಇವರ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿದಂತೆ ಪರಿಶೀಲಿಸಿ, ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತ ಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (5)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ(3)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾನೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(8) ಸಿಆರ್:14:92-93, ಬೆಂಗಳೂರು, ದಿನಾಂಕ:9ನೇ ಫೆಬ್ರವರಿ, 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀ ಲಿಂಗಪ್ಪ ಶಂಕರಪ್ಪ ಕೋಳಿವಾಡ, ಫಾರ್ಮಾಸಿಸ್ಟ್, ಪ್ರಾಥಮಿಕ ಆರೋಗ್ಯ ಕೇಂದ್ರ, ಶೇವಡಿ ನವಲಗುಂದ ತಾಲ್ಲೂಕು ಇವರು ದಿನಾಂಕ:02.01.1981 ರಿಂದ 05.08.93ರ ವರೆಗೆ ಅನಧಿಕೃತ ಗೈರು ಹಾಜರಿ ಆಗಿದ್ದಕ್ಕೆ ದಂಡನೆಯಾಗಿ ಸದರಿ ನಿಯಮ 8(viii)ರ ಪ್ರಕಾರ ಕೂಡಲೇ ಸರ್ಕಾರಿ ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

**ಡಾ: ಜಿ.ಬಿ. ದೇಸಾಯಿ**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್.235

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಈರಣ್ಣ ಬಡಿಗೇರಾ, ಕಿಆಸ(ಪು) ಮಲೇರಿಯ ನಿಯಂತ್ರಣ ಘಟಕ ನಾರಾಯಣಪುರ, ಇವರ ಅ.ಗೈ. ಹಾಜರಿ ಅಂತಿಮ ಆದೇಶ.

**ಓದಲಾಗಿದೆ:**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ:ಡಿಪಿಎನ್ (16) ಸಿಆರ್:43:00-01, ದಿನಾಂಕ:12.03.02.
2. ನೌಕರರ ಲಿಖಿತ ಅಹವಾಲು ಸಲ್ಲಿಸಿಲ್ಲ.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ:ಡಿಪಿಎನ್(16)ಸಿಆರ್:43:2000-01, ದಿನಾಂಕ:23.10.01.
4. ವಿಚಾರಣಾ ವರದಿಯ ಸಂ:ವಿಅ:ವಿಚಾರಣೆ:ಎನ್‌ಬಿ:93:01-02, ದಿನಾಂಕ:17.09.03.

**ಪ್ರಸ್ತಾವನೆ:**

ಶ್ರೀ ಈರಣ್ಣ ಬಡಿಗೇರಾ, ಕಿರಿಯ ಪುರುಷ ಆರೋಗ್ಯ ಸಹಾಯಕ, ಇವರು ಈ ಹಿಂದೆ ಮಲೇರಿಯ ನಿಯಂತ್ರಣ ಹಾಗೂ ಸಾಮಾನ್ಯ ಸ್ವಚ್ಛತಾ ಘಟಕ, ನಾರಾಯಣಪುರ, ಗುಲ್ಬರ್ಗಾ, ದಿನಾಂಕ:01.10.95 ರಿಂದ ಅನಧಿಕೃತ ಗೈರುಹಾಜರಾದ ಬಗ್ಗೆ ಮೇಲೆ ಓದಲಾದ(1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಅದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ(2)ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ, ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ

ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(16) ಸಿಆರ್:43:2000-01, ಬೆಂಗಳೂರು**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀ ಈರಣ್ಣ ಬಡಿಗೇರಾ, ಕಿರಿಯ ಪುರುಷ ಆರೋಗ್ಯ ಸಹಾಯಕ, ಮಲೇರಿಯಾ ನಿಯಂತ್ರಣ ಘಟಕ, ನಾರಾಯಣಪುರ, ಇವರು ದಿನಾಂಕ:01.10.95 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾದ ಬಗ್ಗೆ ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ದಿನಾಂಕ:01.10.96 ರಿಂದ ಅನ್ವಯವಾಗುವಂತೆ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿದ್ದೇನೆ.

**ಡಾ: ಜಿ.ಬಿ. ದೇಸಾಯಿ**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

ಪಿ.ಆರ್.236

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1 ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ:04/ಸಂವಿ/ಸಿ.ಓ.ಪಿ/2004, ದಿನಾಂಕ:13ನೇ ಫೆಬ್ರವರಿ, 2004**

ಬೆಂಗಳೂರು ಮಹಾನಗರ ಕೋರಮಂಗಲ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಬರುವ ಕೋರಮಂಗಲ 5ನೇ ಬ್ಲಾಕ್, 1ನೇ ಅಡ್ಡರಸ್ತೆ (ಎಡನೀರು ಮಠ ರಸ್ತೆ) ಮತ್ತು 5ನೇ ಅಡ್ಡರಸ್ತೆ (60 ಅಡಿ ರಸ್ತೆ) ಗಳಲ್ಲಿ ಸಂಚಾರ ಸಾಂದ್ರತೆಯು ಅತ್ಯಧಿಕವಾಗಿದ್ದು ಪದೇ ಪದೇ ಸಂಚಾರ ಸ್ಥಗಿತಗೊಂಡು ರಸ್ತೆ ಅಪಘಾತಗಳು ಸಂಭವಿಸುತ್ತಿರುವ ಹಿನ್ನೆಲೆಯಲ್ಲಿ ಸಾರ್ವಜನಿಕರ ಸಂಚಾರದ ಹಿತದೃಷ್ಟಿಯಿಂದ ಸದರಿ ರಸ್ತೆಗಳಲ್ಲಿ ಏಕ ಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸುವುದು ಹಾಗೂ ಭಾರೀ ಸರಕು ಸಾಗಣೆ ವಾಹನಗಳ ಸಂಚಾರವನ್ನು ನಿರ್ಬಂಧಿಸುವುದು ಅನಿವಾರ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಪ್ರಾಯೋಗಿಕವಾಗಿ ಒಂದು ತಿಂಗಳ ಕಾಲ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

1. ಕೋರಮಂಗಲ 100ನೇ ಅಡಿ ಮುಖ್ಯರಸ್ತೆಯ ಕಡೆಯಿಂದ 1ನೇ ಅಡ್ಡ ರಸ್ತೆಯಲ್ಲಿ (ಎಡನೀರು ಮಠ ರಸ್ತೆ) ಸಂಚರಿಸಿ 80ನೇ ಅಡಿ ಕೋರಮಂಗಲ ಮುಖ್ಯ ರಸ್ತೆಯನ್ನು ಸೇರುವ ಸಂಚಾರವನ್ನು ಯಥಾ ಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನಿಂದ ಅಂದರೆ 80ನೇ ಅಡಿ ಕೋರಮಂಗಲ ಮುಖ್ಯ ರಸ್ತೆಯ ಕಡೆಯಿಂದ 1ನೇ ಅಡ್ಡ ರಸ್ತೆಯಲ್ಲಿ ಸಂಚರಿಸುವ ಸಂಚಾರವನ್ನು ಮೈಕ್ರೋಲ್ಯಾಂಡ್ ಜಂಕ್ಷನ್ 80ನೇ ಅಡಿ ಕೋರಮಂಗಲ ರಸ್ತೆಯಲ್ಲಿ ನಿರ್ಬಂಧಿಸಲಾಗಿದೆ.
2. 80ನೇ ಅಡಿ ಮುಖ್ಯ ರಸ್ತೆಯಿಂದ 1ನೇ ಅಡ್ಡ ರಸ್ತೆಯ ಮೂಲಕ ಸಂಚರಿಸಿ ಸುಖಸಾಗರ್ ಜಂಕ್ಷನ್‌ನಲ್ಲಿ 100 ಅಡಿ ಮುಖ್ಯ ರಸ್ತೆಯನ್ನು ಸೇರುವ ಸಂಚಾರವನ್ನು ಮೈಕ್ರೋಲ್ಯಾಂಡ್ ಜಂಕ್ಷನ್‌ನಲ್ಲಿ ನಿರ್ಬಂಧಿಸಿ ಸದರಿ ಸಂಚಾರವನ್ನು 80ನೇ ಅಡಿ ಮುಖ್ಯ ರಸ್ತೆಯಲ್ಲಿ ಮುಂದುವರಿಸಿ ಮುನಿರೆಡ್ಡಿ ಕಲ್ಯಾಣಮಂಟಪ ಜಂಕ್ಷನ್‌ನಲ್ಲಿ ಬಲ ತಿರುವು ತೆಗೆದುಕೊಂಡು 5ನೇ ಅಡ್ಡ ರಸ್ತೆ (60 ಅಡಿ ರಸ್ತೆ) ಯಲ್ಲಿ ಸಂಚರಿಸಿ ಕೆನರಾ ಬ್ಯಾಂಕ್ ಜಂಕ್ಷನ್ ಬಳಿಯಲ್ಲಿ 100ನೇ ಅಡಿ ಮುಖ್ಯ ರಸ್ತೆಯನ್ನು ಸೇರಿ ಸಂಚರಿಸುವಂತೆ ಆದೇಶಿಸಿರುತ್ತೇನೆ.
3. 100 ಅಡಿ ಕೋರಮಂಗಲ ಮುಖ್ಯ ರಸ್ತೆಯ ಕಡೆಯಿಂದ 5ನೇ ಅಡ್ಡ ರಸ್ತೆಯ ಮೂಲಕ 80ನೇ ಅಡಿ ಮುಖ್ಯ ರಸ್ತೆಯ ಕಡೆಗೆ ಸಂಚರಿಸುವ ವಾಹನ ಸಂಚಾರವನ್ನು ಕೆನರಾ ಬ್ಯಾಂಕ್ ಜಂಕ್ಷನ್‌ನಲ್ಲಿ ನಿರ್ಬಂಧಿಸಿ ಸದರಿ ಸಂಚಾರವನ್ನು 100ನೇ ಕೋರಮಂಗಲ ಮುಖ್ಯ ರಸ್ತೆಯಲ್ಲಿ ಸಂಚರಿಸಿ ನ್ಯೂ ಸುಖಸಾಗರ್ ಜಂಕ್ಷನ್ ಬಳಿಯಲ್ಲಿ ಬಲ ತಿರುವು ತೆಗೆದುಕೊಂಡು 1ನೇ ಅಡ್ಡರಸ್ತೆ (ಎಡನೀರು ಮಠ ರಸ್ತೆ) ಯಲ್ಲಿ ಸಂಚರಿಸುವಂತೆ ಆದೇಶಿಸಿರುತ್ತೇನೆ.
4. ಕೋರಮಂಗಲ 5ನೇ ಬ್ಲಾಕ್, 1ನೇ ಅಡ್ಡರಸ್ತೆ (ಎಡನೀರು ಮಠ ರಸ್ತೆ) ಮತ್ತು 5ನೇ ಅಡ್ಡರಸ್ತೆ (60 ಅಡಿ ರಸ್ತೆ) ಗಳ ನಡುವೆ ಬರುವ ಎಲ್ಲಾ ಅಡ್ಡ ರಸ್ತೆಗಳಲ್ಲಿ ಭಾರೀ ಸರಕು ಸಾಗಣೆ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ.
5. ಕೋರಮಂಗಲ 60 ಅಡಿ ರಸ್ತೆ ಯೂಕೋ ಬ್ಯಾಂಕ್ ಜಂಕ್ಷನ್‌ನಿಂದ ಕೋರಮಂಗಲ ಪೊಲೀಸ್ ಸ್ಟೇಷನ್ ವರೆವಿಗೆ ಅದಲು ಬದಲು ದಿನಗಳಲ್ಲಿ (alternate days) ವಾಹನ ನಿಲುಗಡೆಯನ್ನು ಆದೇಶಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:28.02.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:13.02.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್.237

## ವಾಣಿಜ್ಯ ತೆರಿಗೆಗಳ ಆಯುಕ್ತರು, ಕರ್ನಾಟಕ, ಬೆಂಗಳೂರು, ಇವರ ನಡವಳಿಗಳು

**ವಿಷಯ:** ಲಿಂಗಸೂರು ರಸ್ತೆ, ರಾಯಚೂರು, ಇಲ್ಲಿರುವ ತನಿಖಾಠಾಣೆಯನ್ನು ಸ್ಥಳಾಂತರಿಸುವ ಬಗ್ಗೆ-ಆದೇಶ.

**ಉಲ್ಲೇಖ :** ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಗುವಾ) ಪೂರ್ವ ವಲಯ, ಗುಲ್ಬರ್ಗಾ, ಇವರ ಪತ್ರ ಸಂಖ್ಯೆ:ಸಿಬ್ಬಂದಿ-3/ಗು/1322/03-04 ದಿನಾಂಕ:01.01.04.

**ಪ್ರಸ್ತಾವನೆ:**

ಉಲ್ಲೇಖಿತ ಪತ್ರದಲ್ಲಿ, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಗುಪ್ತವಾರ್ತೆ) ಪೂರ್ವ ವಲಯ, ಗುಲ್ಬರ್ಗಾ, ಇವರು ಲಿಂಗಸೂರು ರಸ್ತೆ ತನಿಖಾಠಾಣೆಯು ರಾಯಚೂರಿನ ನಿಜಲಿಂಗಪ್ಪ ಕಾಲೋನಿ, ವೆಂಕಟೇಶ ನಗರ, ಅಗ್ರಿಕಲ್ಚರ್ ಯುನಿವರ್ಸಿಟಿ ಕ್ಯಾಂಪಸ್ ಹತ್ತಿರ ಈಗ ಕಾರ್ಯನಿರ್ವಹಿಸುತ್ತಿದ್ದು, 7ನೇ ಕ್ರಾಸ್ ಮೈಲು, ಹುಣ್ಸೆಹುಡಹಳ್ಳಿ ಹತ್ತಿರ, ಲಿಂಗಸೂರು ರಸ್ತೆ, ರಾಯಚೂರು ಇಲ್ಲಿ ಹೊಸದಾಗಿ ನಿರ್ಮಿಸಿದ ಕಟ್ಟಡಕ್ಕೆ ತನಿಖಾಠಾಣೆಯನ್ನು ಸ್ಥಳಾಂತರಿಸಲು ಅನುಮತಿಯನ್ನು ಕೋರಿರುತ್ತಾರೆ.

ಜಂಟಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಹೊಸದಾಗಿ ನಿರ್ಮಿಸಿರುವ ಕಟ್ಟಡಕ್ಕೆ ಲಿಂಗಸೂರು ರಸ್ತೆ ತನಿಖಾಠಾಣೆಯನ್ನು ಸ್ಥಳಾಂತರಿಸುವುದು ಸೂಕ್ತವೆನಿಸಿರುವುದರಿಂದ, ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ:ವಾತೆಅಅ(ಗು ಮತ್ತು ಸ) ವಾತೆಅ-1/ಸಿಆರ್.61/03-04, ದಿನಾಂಕ:29ನೇ ಜನವರಿ, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಈಗಿರುವ ಲಿಂಗಸೂರು ರಸ್ತೆ, ರಾಯಚೂರು ತನಿಖಾಠಾಣೆಯನ್ನು, 7ನೇ ಕ್ರಾಸ್ ಮೈಲು, ಹುಣ್ಸೆಹುಡಹಳ್ಳಿ ಹತ್ತಿರ, ಲಿಂಗಸೂರು ರಸ್ತೆ, ರಾಯಚೂರು ಇಲ್ಲಿ ಹೊಸದಾಗಿ ನಿರ್ಮಿಸಿದ ಕಟ್ಟಡಕ್ಕೆ ಸ್ಥಳಾಂತರಿಸಲು ಕ.ಮಾ.ತೆ. ಕಾಯ್ದೆ 1957ರ ಪ್ರಕರಣ 28ಎ. ಉಪ ಪ್ರಕರಣ 1ರ ಅನ್ವಯ ಪ್ರದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಶೋಕ್‌ಕುಮಾರ್ ಚ.ಮನೋಲಿ, ವಾಣಿಜ್ಯ ತೆರಿಗೆಗಳ ಆಯುಕ್ತರು, ಕರ್ನಾಟಕ, ಬೆಂಗಳೂರು ಆದ ನಾನು ತಕ್ಷಣದಿಂದ ಜಾರಿಗೆ ಬರುವಂತೆ ಸ್ಥಳಾಂತರಿಸಲು ಆದೇಶ ಹೊರಡಿಸಿರುತ್ತೇನೆ.

ವಾಣಿಜ್ಯ ತೆರಿಗೆಗಳ ಆಯುಕ್ತರು,
ಕರ್ನಾಟಕ, ಬೆಂಗಳೂರು.

ಪಿ.ಆರ್.238

## ತೋಟಗಾರಿಕಾ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರ ಕಾರ್ಯಾಲಯದ ಶಿಸ್ತುಕ್ರಮ ನಡವಳಿಗಳು

**ವಿಷಯ:** ಶ್ರೀ ಕುಬೇರಾಚಾರಿ ವಾಹನ ಚಾಲಕರವರನ್ನು ಕರ್ತವ್ಯದಿಂದ ವಜಾ ಮಾಡುವ ಬಗ್ಗೆ- ಶಿಸ್ತುಕ್ರಮಗಳ ಅಂತಿಮ ಆದೇಶ ಕುರಿತು.

**ಉಲ್ಲೇಖ :**
1. ನಿರ್ದೇಶನಾಲಯದ ಆದೇಶ ಸಂಖ್ಯೆ:10-2:102:98-99 ದಿನಾಂಕ:05.02.99.
2. ಈ ಕಛೇರಿ ಸಮಸಂಖ್ಯೆ:ಆದೇಶ ದಿನಾಂಕ:25.03.99
3. ಕಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪ) ಮೈಸೂರುರವರ ವರದಿ ಸಂಖ್ಯೆ:ಹಿಸತೋನಿ:ಮೈ: ವಿಚಾರಣೆ:1:99-2000:646 ದಿನಾಂಕ:13.01.2000.
4. ಆಪಾದಿತರ ಅಂತಿಮ ಅಹವಾಲು ದಿನಾಂಕ:27.03.2000.

**ಪ್ರಸ್ತಾವನೆ:**

ಶ್ರೀ ಕುಬೇರಾಚಾರಿ ವಾಹನ ಚಾಲಕ (ಖಾಯಂ ಪೂರ್ವ ಸೇವಾವಧಿ) ಸಹಾಯಕ ತೋಟಗಾರಿಕೆ ನಿರ್ದೇಶಕರು (ಅಣಬೆ ಯೋಜನೆ) ಅಧೀನ ಮೈಸೂರುರವರು ಖಾಯಂ ಪೂರ್ವಸೇವಾವಧಿಯಲ್ಲಿ ಸರ್ಕಾರಿ ಕೆಲಸಕ್ಕೆ ದಿನಾಂಕ:08.05.98ರಿಂದ ಗೈರುಹಾಜರಾಗಿದ್ದು ನಂತರ 11.05.98 ರಿಂದ ನಿರಂತರವಾಗಿ ಅನಧಿಕೃತ ಗೈರುಹಾಜರಿಯಲ್ಲಿ ಮುಂದುವರಿದ ಪ್ರಯುಕ್ತ ಸದರಿಯವರಿಗೆ ಉಲ್ಲೇಖ (1)ರ ಪ್ರಕಾರ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ 1957ರ ನಿಯಮ (11)ರ ಅಡಿಯಲ್ಲಿ ದೋಷಾರೋಪಣೆಪಟ್ಟಿ ಹಾಗೂ ನೋಟೀಸನ್ನು ಜಾರಿ ಮಾಡಲಾಗಿತ್ತು. ನಂತರ ಉಲ್ಲೇಖ (2)ರ ಪ್ರಕಾರ ಸದರಿಯವರ ವಿರುದ್ಧದ ಆರೋಪಗಳ ಸಮಗ್ರ ಇಲಾಖಾ ವಿಚಾರಣೆಗಾಗಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ಜಿಲ್ಲಾ ಪಂಚಾಯತ್) ಮೈಸೂರುರವರನ್ನು ವಿಚಾರಣಾಧಿಕಾರಿಯವರನ್ನಾಗಿಯೂ ಹಾಗೂ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯವಲಯ) ಮೈಸೂರುರವರ ಕಛೇರಿಯ ಅಧೀಕ್ಷಕರನ್ನು ಮಂಡನಾಧಿಕಾರಿಯವರನ್ನಾಗಿಯೂ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಉಲ್ಲೇಖ (3)ರ ಪ್ರಕಾರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಆಪಾದಿತರಿಗೆ ಅಂತಿಮ ಅಹವಾಲು ಸಲ್ಲಿಸುವ ಸಲುವಾಗಿ ಜಾರಿಮಾಡಲಾಗಿತ್ತು. ಆಪಾದಿತರು ಉಲ್ಲೇಖ (4)ರ ಪ್ರಕಾರ ತಮ್ಮ ಅಂತಿಮ ಅಹವಾಲನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಯವರು ಈ ರೀತಿ ತಿಳಿಸಿದ್ದಾರೆ.

"ಆರೋಪಿತ ನೌಕರರಾದ ಶ್ರೀ ಕುಬೇರಾಚಾರಿ ವಾಹನ ಚಾಲಕ (ಖಾಯಂ ಪೂರ್ವ) ಸಹಾಯಕ ತೋಟಗಾರಿಕೆ ನಿರ್ದೇಶಕರು (ಅಣಬೆ ಯೋಜನೆ) ಮೈಸೂರುರವರ ವಿರುದ್ಧ ಮಾಡಲಾಗಿರುವ ದೋಷಾರೋಪಣೆಗಳು ರುಜುವಾತಾಗಿದೆ ಎಂದು ಅಭಿಪ್ರಾಯ ಮಾಡಲಾಗಿದೆ" ಎಂಬುದಾಗಿ ತಿಳಿಸಿದ್ದಾರೆ. ಆಪಾದಿತರು ಅಂತಿಮ ಹೇಳಿಕೆಯಲ್ಲಿ ಈ ರೀತಿ ತಿಳಿಸಿದ್ದಾರೆ.

"ನಾನು ತಮ್ಮ ಇಲಾಖೆಯಲ್ಲಿ ವಾಹನ ಚಾಲಕರಾಗಿ ಕೆಲಸ ಮಾಡಲು ಇಷ್ಟವಿಲ್ಲದ್ದರಿಂದ ನಾನು ಈಗಾಗಲೇ ನನ್ನ ರಾಜೀನಾಮೆಯನ್ನು ಸಲ್ಲಿಸಿದ್ದು, ನಿಮ್ಮ ಮೇಲ್ಕಂಡ ನೋಟೀಸಿನಂತೆ "ಶಿಸ್ತು ಕ್ರಮ ವಿಚಾರಣೆಗೆ" ಹಾಜರಾಗುವ ಅವಶ್ಯಕತೆ ಇರುವುದಿಲ್ಲವಾದ್ದರಿಂದ ನಿಮ್ಮ ಪತ್ರದಂತೆ ಇದೇ ಅಂತಿಮ ಅಹವಾಲು ಎಂದು ಪರಿಗಣಿಸಿ ನನ್ನ ವಿಚಾರಣೆಯನ್ನು ಮುಕ್ತಾಯ ಮಾಡಬೇಕಾಗಿ ಕೋರುತ್ತೇನೆ ಎಂಬುದಾಗಿ ತಿಳಿಸಿದ್ದಾರೆ. ಇವರ ವಿರುದ್ಧದ ಆರೋಪ, ಇಲಾಖಾ ವಿಚಾರಣಾ ವರದಿ ಹಾಗೂ ಅವರ ಅಂತಿಮ ಅಹವಾಲಿನಲ್ಲಿರುವ ಎಲ್ಲಾ ಅಂಶಗಳನ್ನು ಅಮೂಲಾಗ್ರವಾಗಿ ಪರಿಶೀಲಿಸಿದಾಗ ವ್ಯಕ್ತವಾಗುವ ಅಂಶವೇನೆಂದರೆ, ಶ್ರೀ ಕುಬೇರಾಚಾರಿ ವಾಹನ

ಚಾಲಕ ಸಹಾಯಕ ತೋಟಗಾರಿಕೆ ನಿರ್ದೇಶಕರು, (ಅಣಬೆ ) ಅಧೀನ ಮೈಸೂರುರವರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರಿಯಲು ಇಚ್ಛೆ ಇರುವುದಿಲ್ಲ ಎಂಬುದು ಸ್ಪಷ್ಟವಾಗಿದೆ. ಅಲ್ಲದೆ, ಇವರು ಅನಧಿಕೃತ ಗೈರು ಹಾಜರಿಯಲ್ಲಿ ಮುಂದುವರಿದಿರುವುದು ಸಹ ಸ್ಪಷ್ಟವಾಗಿರುತ್ತದೆ. ಆದ್ದರಿಂದ ಇವರ ವಿರುದ್ಧದ ಶಿಸ್ತು ಪ್ರಕರಣವನ್ನು ಅಮೂಲಾಗ್ರವಾಗಿ ಅವಲೋಕಿಸಿ, ಇವರನ್ನು ಸೇವೆಯಿಂದ ವಜಾ ಮಾಡುವುದೇ ಸೂಕ್ತವೆಂದು ತೀರ್ಮಾನಿಸಿ ಮುಂದಿನಂತೆ ಆದೇಶ ಹೊರಡಿಸಿರುತ್ತೇನೆ.

**ಆದೇಶ**

**ಸಂಖ್ಯೆ:ತೋಇ:ಅ:ಸಿ:10-2:102:98-99, ದಿನಾಂಕ:21ನೇ ನವೆಂಬರ್, 2000**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿಚಾರಗಳ ಹಿನ್ನೆಲೆಯಲ್ಲಿ ಹಾಗೂ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ 1957ರ ನಿಯಮ 8(viii) ರಲ್ಲಿ ಪ್ರದತ್ತವಾಗಿರುವಂತೆ ಶ್ರೀ ಪಿ.ಬಿ. ರಾಮಮೂರ್ತಿ ಐ.ಎ.ಎಸ್. ತೋಟಗಾರಿಕಾ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಯಾದ ನಾನು ಆಪಾದಿತರಾದ ಶ್ರೀ ಕುಬೇರಾಚಾರಿ ವಾಹನ ಚಾಲಕ ಸಹಾಯಕ ತೋಟಗಾರಿಕೆ ನಿರ್ದೇಶಕರು (ಅಣಬೆ) ಅಧೀನ ಮೈಸೂರು ರವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ತೋಟಗಾರಿಕೆ ನಿರ್ದೇಶಕರು
ಹಾಗೂ ಶಿಸ್ತು ಪ್ರಾಧಿಕಾರ.

ಪಿ.ಆರ್.239

**ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರವರ ಕಛೇರಿ, ಕರ್ನಾಟಕ ರಾಜ್ಯ,**
**ನಂ.17, ಜಯನಿವಾಸ, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು-560 004**

**ಅಧಿಸೂಚನೆ**

**ಸಂಖ್ಯೆ:ಸಿಬ್ಬಂದಿ-2/ನೇಮಕಾತಿ/58/2000-2001, ದಿನಾಂಕ:17ನೇ ಫೆಬ್ರವರಿ, 2004**

**ಜೂನಿಯರ್ ಕಂಪ್ಯೂಟರ್ ಪ್ರೋಗ್ರಾಮರ್ ಮತ್ತು ಡಾಟಾ ಎಂಟ್ರಿ ಆಪರೇಟರ್ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿಗೆ ಅರ್ಜಿ ಆಹ್ವಾನ**

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಯಲ್ಲಿ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಈ ಎರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗುತ್ತಿಗೆ ಆಧಾರದ ಮೇಲೆ ತಾತ್ಕಾಲಿಕ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಅರ್ಜಿಯನ್ನು ಸರ್ಕಾರಿ ಮುದ್ರಣ ಮಳಿಗೆ ಅಥವಾ ಸರ್ಕಾರಿ ಪುಸ್ತಕ ಮಳಿಗೆಯಲ್ಲಿ ನಮೂನೆ-1 (ಸಿ ಸಮೂಹ ನಾನ್ ಗೆಜೆಟೆಡ್)ರಲ್ಲಿನ ಅರ್ಜಿಯನ್ನು ಖರೀದಿಸಿ, ಅಭ್ಯರ್ಥಿಯ ಸ್ವಂತ ಬರವಣಿಗೆಯಲ್ಲಿ ತುಂಬಿ ಸಲ್ಲಿಸತಕ್ಕದ್ದು. ಈ ಹುದ್ದೆಗಳಿಗೆ ಗುತ್ತಿಗೆ ಆಧಾರದ ನೇಮಕಾತಿಯನ್ನು ಸರ್ಕಾರದ ಆದೇಶ ಸಂಖ್ಯೆ:ಸಇ/144/ಎಲಸೇ/2001, ಬೆಂಗಳೂರು, ದಿನಾಂಕ:05.12.2002 ಹಾಗೂ ಸೇರ್ಪಡೆ ಆದೇಶ ಸಂಖ್ಯೆ:ಸಇ/250/ಎಲಸೇ/2003, ಬೆಂಗಳೂರು, ದಿನಾಂಕ:29.10.2003 ಗಳ ಷರತ್ತು ನಿಬಂಧನೆಗಳನ್ವಯ ಮಾಡಲಾಗುವುದು.

**I. (1) ಹುದ್ದೆಯ ಹೆಸರು ಮತ್ತು ಸಂಚಿತ ವೇತನ ಕೆಳಕಂಡಂತಿರುತ್ತದೆ.**

(i) ಜೂನಿಯರ್ ಕಂಪ್ಯೂಟರ್ ಪ್ರೋಗ್ರಾಮರ್- ಒಂದು ಹುದ್ದೆ- ಸಂಚಿತ ವೇತನ ರೂ.8,940.00
(ಎಂಟು ಸಾವಿರದ ಒಂಬೈನೂರ ನಲವತ್ತು ರೂಪಾಯಿಗಳು ಮಾತ್ರ)

(ii) ಡಾಟಾ ಎಂಟ್ರಿ ಆಪರೇಟರ್ ಒಂದು ಹುದ್ದೆ-ಸಂಚಿತ ವೇತನ ರೂ. 4,470.00
(ನಾಲ್ಕು ಸಾವಿರದ ನಾಲ್ಕು ನೂರಾ ಎಪ್ಪತ್ತು ರೂಪಾಯಿಗಳು ಮಾತ್ರ)

**II. (1) ಯಾರು ಅರ್ಜಿ ಸಲ್ಲಿಸಬಹುದು:**

ಈ ಕೆಳಕಂಡ ವಿದ್ಯಾರ್ಹತೆ ಪೂರೈಸಿರುವ ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಬಹುದಾಗಿದೆ.

**(i)** ಜೂನಿಯರ್ ಕಂಪ್ಯೂಟರ್ ಪ್ರೋಗ್ರಾಮರ್ ಹುದ್ದೆಗೆ ಮಾನ್ಯತೆ ಪಡೆದ ವಿಶ್ವವಿದ್ಯಾನಿಲಯದಿಂದ ಬ್ಯಾಚುಲರ್ ಆಫ್ ಕಂಪ್ಯೂಟರ್ ಸೈನ್ಸ್‌ನಲ್ಲಿ ಇಂಜಿನಿಯರ್ ಪದವಿ ಅಥವಾ ಮಾಸ್ಟರ್ ಆಫ್ ಕಂಪ್ಯೂಟರ್ ಅಪ್ಲಿಕೇಷನ್ ಪದವಿ.

**(ii)** ಡಾಟಾ ಎಂಟ್ರಿ ಆಪರೇಟರ್ ಹುದ್ದೆಗೆ ಯಾವುದಾದರೂ ಮಾನ್ಯತೆ ಪಡೆದ ವಿಶ್ವವಿದ್ಯಾನಿಲಯದ ಪದವೀಧರರಾಗಿರಬೇಕು ಹಾಗೂ ಕರ್ನಾಟಕ ಸರ್ಕಾರದ ಕಂಪ್ಯೂಟರ್ ಕೇಂದ್ರ ನಡೆಸಿರುವ ಲಿಖಿತ ಆಪ್ಟಿಟ್ಯೂಡ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರ ತಕ್ಕದ್ದು.

**(2) ವಯೋಮಿತಿ:** ಅಭ್ಯರ್ಥಿಗಳ ವಯೋಮಿತಿ ಈ ಕೆಳಗಿನಂತಿರಬೇಕು.

| ಕ್ರಮ ಸಂಖ್ಯೆ | ವಯಸ್ಸು | ಕನಿಷ್ಠ | ಗರಿಷ್ಠ |
|---|---|---|---|
| 1. | ಸಾಮಾನ್ಯ | 18 | 33 |
| 2. | ಪರಿಶಿಷ್ಟಜಾತಿ | 18 | 38 |
| 3. | ಪರಿಶಿಷ್ಟಪಂಗಡ | 18 | 38 |
| 4. | ಹಿಂದುಳಿದ ಪ್ರವರ್ಗಗಳು<br>ಪ್ರವರ್ಗ-1 | 18 | 38 |
| 5. | ಪ್ರವರ್ಗ-2(ಎ), 2(ಬಿ), 3(ಎ), 3(ಬಿ) | 18 | 36 |

**(3) ಶುಲ್ಕ:** ಪರಿಶಿಷ್ಟಜಾತಿ, ಪರಿಶಿಷ್ಟಪಂಗಡ ಹಾಗೂ ಪ್ರವರ್ಗ-1ರ ಅಭ್ಯರ್ಥಿಗಳಿಗೆ ಶುಲ್ಕದಿಂದ ವಿನಾಯಿತಿ ಇರುತ್ತದೆ. ಇತರರಿಗೆ ರೂ.100.00 ಇದನ್ನು ಕ್ರಾಸ್ಡ್ ಡಿಮ್ಯಾಂಡ್ ಡ್ರಾಫ್ಟ್ ಅಥವಾ ಕ್ರಾಸ್ ಮಾಡಿದ ಇಂಡಿಯನ್ ಪೋಸ್ಟಲ್ ಆರ್ಡರ್ ಮೂಲಕ ಈ ಅಧಿಸೂಚನೆ ಹೊರಡಿಸಿದ ದಿನಾಂಕದಂದು ಅಥವಾ ನಂತರ ಖರೀದಿಸಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು, ಬೆಂಗಳೂರು, ಇವರಿಗೆ ಸಂದಾಯವಾಗುವಂತೆ ಕಳುಹಿಸಬೇಕು.

**III. ಅರ್ಜಿ ಸಲ್ಲಿಸಬೇಕಾದ ಸ್ಥಳ ಹಾಗೂ ಕೊನೆಯ ದಿನಾಂಕ:**

ಭರ್ತಿ ಮಾಡಿದ ಅರ್ಜಿಯನ್ನು ನಿಗದಿಪಡಿಸಿದ ದೃಢೀಕೃತ ಎಲ್ಲಾ ದಾಖಲೆಗಳೊಂದಿಗೆ ದ್ವಿಪ್ರತಿಯಲ್ಲಿ ಇತ್ತೀಚಿನ ಎರಡು ಭಾವಚಿತ್ರಗಳೊಂದಿಗೆ ಖುದ್ದಾಗಿ ಅಥವಾ ಅಂಚೆ ಮೂಲಕ ದಿನಾಂಕ:20.03.2004ರ ಸಂಜೆ 4.30 ಘಂಟೆಯೊಳಗೆ ಮೇಲಿನ ವಿಳಾಸಕ್ಕೆ ಸಲ್ಲಿಸತಕ್ಕದ್ದು. ಅಪೂರ್ಣಗೊಂಡ ಅರ್ಜಿ ಅಥವಾ ತಡವಾಗಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**IV. ಈ ನೇಮಕಾತಿಯು ಕೆಳಕಂಡ ಷರತ್ತು ಮತ್ತು ನಿಬಂಧನೆಗೆ ಒಳಪಟ್ಟಿರುತ್ತದೆ:**

ಈ ನೇಮಕಾತಿಯ ಕುರಿತ ಅಂತಿಮ ತೀರ್ಮಾನವು ಸರ್ಕಾರದ ಸಹಕಾರ ಇಲಾಖೆ ಇವರದ್ದಾಗಿರುತ್ತದೆ. ನೇಮಕಾತಿ ಆದೇಶವನ್ನು ಸ್ವೀಕರಿಸಿದ ಅಭ್ಯರ್ಥಿಗಳು ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಬರೆದು ಕೊಡತಕ್ಕದ್ದು.

ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.

ನಿರ್ದೇಶಕರು,
ಸಹಕಾರ ಸಂಘಗಳ ಲೆಕ್ಕಪರಿಶೋಧನಾ
ನಿರ್ದೇಶಕರವರ ಕಛೇರಿ, ಬೆಂಗಳೂರು
ಕರ್ನಾಟಕ ರಾಜ್ಯ.

ಪಿ.ಆರ್.240

**IN THE COURT OF COMMISSIONER FOR WORKMEN'S COMPENSATION BIDAR**

**PROCLAMATION**

**No.LOB/WCA/Cr-12/2004**

| **Applicants:** | **V/s** | **Respondents:** |
| --- | --- | --- |
| Shankar @ Shankarappa, | 1. | Arti W/o Basavaraj |
| S/o Bhojappa Harijan | | Age:Major Occ:Business |
| age 50 yrs Occ: Labour, | | R/o Ninghalli, Tq:Bidar |
| R/o Bompalli, Tq:Bidar. | 2. | United India Insurance Co.Ltd., Bidar. |

Sri Shankar @ Shankarappa F/o Budhu R/o Bompalli Tq: Bidar have/has filed application in this court claiming compensation stating that Late: Budhu was working as Driver Under the Respondent No. I he met with an accident arising out of and during the course of employment as a result he died on: 28.09.2003

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications or objections are received within the specified date the court will proceeded further in the matter.

COMMISSIONER FOR WORKMEN'S
COMPENSATION, BIDAR.

PR-242

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನರವರ ನ್ಯಾಯಾಲಯ**

**ಸಂಖ್ಯೆ: ಹಾಸನ:ಅಸಂದಳ:71ಎ:ಅಮೊ:40:03-04, ದಿನಾಂಕ:8ನೇ ಜನವರಿ, 2004**

| | |
| --- | --- |
| **ಉಪಸ್ಥಿತರು:** | ಎಂ.ಬಿ. ಭೀಮಯ್ಯ<br>ಉಪಅರಣ್ಯ ಸಂರಕ್ಷಣಾಧಿಕಾರಿಗಳು,<br>ಅರಣ್ಯ ಸಂಚಾರಿ ದಳ, ಹಾಸನ. |
| **ಫಿರ್ಯಾದಿದಾರರು:** | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ,<br>ಅರಣ್ಯ ಸಂಚಾರಿ ದಳ, ಹಾಸನ. |
| **ಮಾಲೀಕರು:** | ಇಲ್ಲ |

**ಪ್ರಕರಣದ ಹಿನ್ನೆಲೆ:**

**ದಿನಾಂಕ:** 19.09.03 ರಂದು ಮಾರುತಿ ವ್ಯಾನ್ ನಂ.ಕೆಎ-03-8941ರಲ್ಲಿ ಒಟ್ಟು 70 ಕೆಜಿ ತೂಕದ ಶ್ರೀಗಂಧವನ್ನು ಯಾವುದೇ ತರಹದ ರಹದಾರಿ ಇಲ್ಲದೇ ಯಾರೋ ಅಕ್ರಮವಾಗಿ ಶಿರಾಮಕ್ಕಾಪಟ್ಟಣ ರಸ್ತೆ ಬುಕ್ಕಾಪಟ್ಟಣ ಗ್ರಾಮದ ಹತ್ತಿರ ಸಾಗಿಸುತ್ತಿದ್ದಾಗ, ಹಾಸನ

ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಸಿಬ್ಬಂದಿಗಳು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ವಶಪಡಿಸಿಕೊಂಡು ಪಂಚನಾಮೆ ಜರುಗಿಸಿ, ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ 40:03-04 ದಿನಾಂಕ:20.09.03ನ್ನು ದಾಖಲು ಮಾಡಿಕೊಂಡು ವಶಪಡಿಸಿಕೊಂಡ ವಾಹನದ ಇಂಜಿನ್ ನಂ.28293, ಚಾಸೀಸ್ ನಂ.ಎಸ್‌ಟಿ:91:ಐಎನ್:931605 ಎಂದಿರುತ್ತದೆಂದು, ಈ ಸಂಬಂಧ 3 ಜನ ವ್ಯಕ್ತಿಗಳು ತಪ್ಪಿಸಿಕೊಂಡಿರುತ್ತಾರೆ ಎಂಬುದಾಗಿ ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ, ವಾಹನ ಹಾಗೂ ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುತ್ತಾರೆ. ಅದರಂತೆ ಸದರಿ ವಾಹನ ಮತ್ತು ಶ್ರೀಗಂಧವನ್ನು ಮುಂದಿನ ಆದೇಶದವರೆವಿಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಸರ್ಕಾರಿ ಶ್ರೀಗಂಧದ ಕೋಠಿ, ಹಾಸನರವರ ವಶಕ್ಕೆ ನೀಡಲಾಗಿತ್ತು.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ನೇ ಸೆಕ್ಷನ್ 71ಎ ಪ್ರಕಾರ 30 ದಿನಗಳ ಕಾಲಾವಕಾಶವನ್ನು ಕೊಟ್ಟು ವಾಹನದ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದಂತೆ, ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತು ಪಡಿಸುವುದು. ತಪ್ಪಿದಲ್ಲಿ ವಾಹನ ಹಾಗೂ ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಬಗ್ಗೆ ಪ್ರಕಟಣೆಯನ್ನು ದಿನಾಂಕ:04.12.2003ರ ಭಾಗ 6ಎ, ಪುಟ ಸಂಖ್ಯೆ:2971ರ ಕರ್ನಾಟಕ ರಾಜ್ಯ ಪತ್ರದಲ್ಲಿಯೂ, ಹಾಗೂ ದಿನಾಂಕ:06.12.2003ರಂದು ಜನಮಿತ್ರ ಕನ್ನಡ ದಿನಪತ್ರಿಕೆಯಲ್ಲೂ ಸಹ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರುರವರಲ್ಲಿ ಪತ್ರ ವ್ಯವಹರಿಸಿದಾಗ, ಅವರಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲ.

ಮುಂದುವರಿದು ಹಾಲಿ ವಾಹನದ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನಪಟ್ಟರೂ ಪತ್ತೆಯಾಗದೇ ಇರುವುದರಿಂದ, ಹಾಗೂ ಪ್ರಕಟಣೆಯಂತೆ 30 ದಿನಗಳ ಕಾಲಾವಕಾಶವು ದಿನಾಂಕ:07.01.2004ಕ್ಕೆ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಿಸಿದಂತೆ, ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ವಾಹನದ ವಾರಸುದಾರರು ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ಮಾಲೀಕತ್ವವನ್ನು ರುಜುವಾತು ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದಾಗಿ ಸಾಬೀತುಪಡಿಸಲು ವಿಫಲರಾದ ಕಾರಣ ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ, ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ ಹಾಗೂ ಈ ನ್ಯಾಯಾಲಯಕ್ಕೆ ಪ್ರಕರಣದ ಪಂಚನಾಮೆಯನ್ನು ಏಕೆ ನಂಬಬಾರದು ಎಂಬ ಬಗ್ಗೆ ಪ್ರಶ್ನೆ ಉದ್ಭವಿಸಿರುವುದರಿಂದ ಹಾಗೂ ಪ್ರಕರಣದ ಪಂಚನಾಮೆಯನ್ನು ಯಾರೂ ಪ್ರಶ್ನಿಸಿಲ್ಲವಾದ್ದರಿಂದ, ದಿನಾಂಕ:19.09.03ರಂದು ಮಾರುತಿ ವ್ಯಾನ್ ನಂ.ಕೆಎ-03-8941ರಲ್ಲಿ ಅಕ್ರಮವಾದ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುವಲ್ಲಿ ತೊಡಗಿದ್ದವು:ನಿರತವಾದುದೆಂದು ದೃಢಪಟ್ಟಿರುವುದರಿಂದ ಈ ಕೆಳಗಿನಂತೆ ಆದೇಶಿಸಿದ್ದೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಎಂ.ಬಿ. ಭೀಮಯ್ಯ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ ಆದ ನಾನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಒಂದು ಮಾರುತಿ ವ್ಯಾನ್ ನಂ.ಕೆಎ-03-8941, ಇಂಜಿನ್ ನಂ.28293, ಚಾಸೀಸ್ ನಂ.ಎಸ್‌ಟಿ:91:ಐಎನ್:931605 ಹಾಗೂ 70 ಕೆಜಿ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣ ಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:08.01.2004 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ 30 ದಿನಗಳೊಳಗಾಗಿ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ:08.01.2004 ರಂದು ನನ್ನ ಆದೇಶದಂತೆ ಬೆರಳಚ್ಚು ಮಾಡಿಸಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿದ್ದೇನೆ.

**ಎಂ.ಬಿ. ಭೀಮಯ್ಯ**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿ ದಳ, ಹಾಸನ.

ಪಿ.ಆರ್.243

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನರವರ ನ್ಯಾಯಾಲಯ**

**ಸಂಖ್ಯೆ: ಹಾಸನ:ಅಸಂದಳ:71ಎ:ಅಮೊ:10:03-04, ದಿನಾಂಕ:8ನೇ ಜನವರಿ, 2004**

**ಉಪಸ್ಥಿತರು:** ಎಂ.ಬಿ. ಭೀಮಯ್ಯ
ಉಪಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನ.

**ಪಿರ್ಯಾಧಿದಾರರು:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ.

**ಮಾಲೀಕರು:** ಇಲ್ಲ

**ಪ್ರಕರಣದ ಹಿನ್ನೆಲೆ:**

ದಿನಾಂಕ:10.06.03 ರಂದು ಮಾರುತಿ ಕಾರು ನಂ.ಕೆಎ-04:ಪಿ-5286 ರಲ್ಲಿ ಒಟ್ಟು 101 ಕೆಜಿ ತೂಕದ ಶ್ರೀಗಂಧವನ್ನು ಯಾವುದೇ ತರಹದ ರಹದಾರಿ ಇಲ್ಲದೇ ಯಾರೋ ಅಕ್ರಮವಾಗಿ ಶಿರಾ-ಹುಳಿಯಾರು ರಸ್ತೆ-ಬುಕ್ಕಾಪಟ್ಟಣ ಸೇತುವೆ ಹತ್ತಿರ ಸಾಗಿಸುತ್ತಿದ್ದಾಗ, ಹಾಸನ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ವಶಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ, ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ 10:03-04 ದಿನಾಂಕ:10.06.03ನ್ನು ದಾಖಲು ಮಾಡಿಕೊಂಡು ವಶಪಡಿಸಿಕೊಂಡ ವಾಹನದ ಇಂಜಿನ್ ನಂ.ಎಫ್:8:ಬಿಐಎನ್:1183752, ಚಾಸೀಸ್ ನಂ.ಎಸ್‌ಬಿ308:ಐಎನ್:787030 ಎಂದಿರುತ್ತದೆಂದು, ಈ ಸಂಬಂಧ ಎರಡು ಜನ ವ್ಯಕ್ತಿಗಳು ತಪ್ಪಿಸಿಕೊಂಡಿರುತ್ತಾರೆ ಎಂಬುದಾಗಿ ತಿಳಿಸುತ್ತಾ, ಕಾರಿನಲ್ಲಿ ಇನ್ನೊಂದು ನಂಬರ್ ಪ್ಲೇಟ್ ಇದ್ದು, ಅದರ ನಂಬರ್ ಕೆಎ-03:ಎನ್-2696 ಎಂದಿದ್ದು, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಹಾಗೂ ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುತ್ತಾರೆ. ಅದರಂತೆ ಸದರಿ ವಾಹನ ಮತ್ತು ಶ್ರೀಗಂಧವನ್ನು ಮುಂದಿನ ಆದೇಶದವರೆವಿಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಸರ್ಕಾರಿ ಶ್ರೀಗಂಧದ ಕೋಠಿ, ಹಾಸನರವರ ವಶಕ್ಕೆ ನೀಡಲಾಗಿತ್ತು.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ನೇ ಸೆಕ್ಷನ್ 71ಎ ಪ್ರಕಾರ 30 ದಿನಗಳ ಕಾಲಾವಕಾಶವನ್ನು ಕೊಟ್ಟು ವಾಹನದ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದಂತೆ, ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತು ಪಡಿಸುವುದು. ತಪ್ಪಿದಲ್ಲಿ ವಾಹನ ಹಾಗೂ ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಬಗ್ಗೆ ಪ್ರಕಟಣೆಯನ್ನು ದಿನಾಂಕ:04.12.2003ರ ಭಾಗ 6ಎ, ಪುಟ ಸಂಖ್ಯೆ:2971ರ ಕರ್ನಾಟಕ ರಾಜ್ಯ ಪತ್ರದಲ್ಲಿಯೂ, ಹಾಗೂ ದಿನಾಂಕ:06.12.2003ರಂದು ಜನಮಿತ್ರ ಕನ್ನಡ ದಿನಪತ್ರಿಕೆಯಲ್ಲೂ ಸಹ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಂಗಳೂರು-ಉತ್ತರ ಇವರಲ್ಲಿ ಪತ್ರ ವ್ಯವಹರಿಸಿದಾಗ, ಸದರಿಯವರು ಕೆಎ-04-ಪಿ-5286ರ ವಾಹನವು ಶ್ರೀಮತಿ ಸ್ವಾತಿ ಚಟರ್ಜಿ ಪ್ರೊ:ಎಸ್. ಭಟ್ಟಾಚಾರ್ಯ, ಟಿ-20, II ಎಸ್‌ಸಿ ಕ್ವಾರ್ಟರ್ಸ್ IIಎಸ್‌ಸಿ, ಬೆಂಗಳೂರು ಇವರ ಹೆಸರಿನಲ್ಲಿರುತ್ತದೆ ಎಂಬುದಾಗಿ 26.06.2003ರ ಪತ್ರದಲ್ಲಿ ತಿಳಿಸಿರುತ್ತಾರೆ. ಅದರಂತೆ ಶ್ರೀಮತಿ ಸ್ವಾತಿ ಚಟರ್ಜಿ, ಬೆಂಗಳೂರುರವರಿಗೆ ಕಾರಣ ಕೇಳುವ ಪತ್ರವನ್ನು ದಿನಾಂಕ:15.07.03 ರಂದು ಜಾರಿ ಮಾಡಲಾಗಿರುತ್ತದೆ. ಅದಕ್ಕೆ ಪ್ರತಿಯಾಗಿ ಲಿಖಿತ ಉತ್ತರವನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿದ್ದು, ಅದು ದಿನಾಂಕ:06.08.2003 ರಂದು ಸ್ವೀಕೃತವಾಗಿದ್ದು, ಅದರಲ್ಲಿ ಸದರಿ ವಾಹನವು ಈಗಲೂ ತಮ್ಮ ಬಳಿಯಲ್ಲಿ ಇದೆ. ತಾವು ವಾಹನವನ್ನು ಬೇರೆ ಯಾರಿಗೂ ಕೊಟ್ಟಿರುವುದಿಲ್ಲ. ತಾವೇ ದಿನಾಲು ಉಪಯೋಗಿಸುತ್ತಿದ್ದು, ಈ ಪ್ರಕರಣಕ್ಕೂ ತಮಗೂ ಯಾವುದೇ ಸಂಬಂಧವಿರುವುದಿಲ್ಲ ಎಂಬುದಾಗಿ ಸ್ಪಷ್ಟವಾಗಿ ದೃಢೀಕರಿಸಿರುತ್ತಾರೆ. ಹಾಗೂ ಇನ್ನೊಂದು ನಂಬರ್ ಪ್ಲೇಟ್ ಇದ್ದುದರ ಬಗ್ಗೆ ಕೆಎ-03-ಎನ್-2696ರ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಪೂರ್ವ ಇವರಿಗೆ ಪತ್ರ ವ್ಯವಹರಿಸಲಾಗಿದ್ದು, ಅವರಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲ. ಇದರಿಂದ ಯಾರೋ ದುಷ್ಕರ್ಮಿಗಳು ಕದ್ದು ಖೋಟಾ ನಂಬರನ್ನು ನಮೂದಿಸಿ ಉದ್ದೇಶಪೂರ್ವಕವಾಗಿ ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಲು ತೊಡಗಿಸಿದ್ದಾರೆ ಎಂಬುದು ರುಜುವಾತಾಗಿರುತ್ತದೆ.

ಮುಂದುವರಿದು ಹಾಲಿ ವಾಹನದ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನಪಟ್ಟರೂ ಪತ್ತೆಯಾಗದೇ ಇರುವುದರಿಂದ, ಹಾಗೂ ಪ್ರಕಟಣೆಯಂತೆ 30 ದಿನಗಳ ಕಾಲಾವಕಾಶವು ದಿನಾಂಕ:07.01.2004ಕ್ಕೆ ಮುಗಿದಿದ್ದು, ಈ ವಾಹನದ ವಾರಸುದಾರರು ಯಾರೂ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ಮಾಲೀಕತ್ವವನ್ನು ರುಜುವಾತು ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದಾಗಿ ಸಾಬೀತು ಪಡಿಸಲು ವಿಫಲರಾದ ಕಾರಣ ಸಂಬಂಧಪಟ್ಟ ದಾಖಲಾತಿ ಹಾಗೂ ಮುದ್ದೆ ಮಾಲನ್ನು ಪರಿಶೀಲಿಸಿ, ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಹಾಗೂ ಈ ನ್ಯಾಯಾಲಯಕ್ಕೆ ಪ್ರಕರಣದ ಪಂಚನಾಮೆಯನ್ನು ಏಕೆ ನಂಬಬಾರದು ಎಂಬ ಪ್ರಶ್ನೆ ಉದ್ಭವಿಸಿರುವುದರಿಂದ, ಹಾಗೂ ಪ್ರಕರಣದ ಪಂಚನಾಮೆಯನ್ನು ಯಾರೂ ಪ್ರಶ್ನಿಸಿಲ್ಲವಾದ್ದರಿಂದ, ದಿನಾಂಕ:10.06.2003 ರಂದು ಮಾರುತಿ ಕಾರು ನಂ.ಕೆಎ-04-ಪಿ-5286 (ಡೂಪ್ಲಿಕೇಟ್ ನಂಬರ್-ಕೆಎ-03-ಎನ್-2696)ರಲ್ಲಿ ಅಕ್ರಮವಾದ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುವಲ್ಲಿ ತೊಡಗಿತ್ತು: ನಿರತವಾದುದೆಂದು ದೃಢಪಟ್ಟಿರುವುದರಿಂದ ಈ ಕೆಳಗಿನಂತೆ ಆದೇಶಿಸಿದ್ದೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಎಂ.ಬಿ. ಭೀಮಯ್ಯ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಹಾಸನ ಆದ ನಾನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಒಂದು ಮಾರುತಿ ಕಾರು ನಂ.ಕೆಎ-04-ಪಿ-5286 (ಇನ್ನೊಂದು ನಂಬರ್ ಪ್ಲೇಟ್ ಇದ್ದು ನಂ.ಕೆಎ-03-ಎನ್-2696) ಇಂಜಿನ್ ನಂ.ಎಫ್-8:ಬಿಐಎನ್:1183752 ಚಾಸೀಸ್ ನಂ.ಎಸ್‌ಬಿ:308:ಐಎನ್:787030, ಹಾಗೂ 101 ಕೆಜಿ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:08.01.2004 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ 30 ದಿನಗಳೊಳಗಾಗಿ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:08.01.2004 ರಂದು ನನ್ನ ಆದೇಶದಂತೆ ಬೆರಳಚ್ಚು ಮಾಡಿಸಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿದ್ದೇನೆ.

**ಎಂ.ಬಿ. ಭೀಮಯ್ಯ**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿ ದಳ, ಹಾಸನ.

ಪಿ.ಆರ್.244

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನರವರ ನ್ಯಾಯಾಲಯ**

**ಸಂಖ್ಯೆ: ಹಾಸನ:ಅಸಂದಳ:71ಎ:ಅಮೊ:9:03-04, ದಿನಾಂಕ:8ನೇ ಜನವರಿ, 2004**

**ಉಪಸ್ಥಿತರು:** ಎಂ.ಬಿ. ಭೀಮಯ್ಯ
ಉಪಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿ ದಳ, ಹಾಸನ.

**ಫಿರ್ಯಾದಿದಾರರು:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಹಾಸನ.

**ಮಾಲೀಕರು:** ಇಲ್ಲ

**ಪ್ರಕರಣದ ಹಿನ್ನೆಲೆ:**

ದಿನಾಂಕ:10.06.03 ರಂದು ಫಿಯಟ್ ಕಾರು ನಂ.ಕೆಎ-01:ಎಂ-5255ರಲ್ಲಿ ಒಟ್ಟು 150 ಕೆಜಿ ತೂಕದ ಶ್ರೀಗಂಧವನ್ನು ಯಾವುದೇ ತರಹದ ರಹದಾರಿ ಇಲ್ಲದೇ ಯಾರೋ ಅಕ್ರಮವಾಗಿ ಶಿರಾ-ಅಮಾರಪುರಂ ರಾಜ್ಯ ಹೆದ್ದಾರಿ ಕಲ್ಲುಕೋಟೆ ಗ್ರಾಮದ ಬಳಿ ಸಾಗಿಸುತ್ತಿದ್ದಾಗ, ಹಾಸನ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ವಶಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ, ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ 9:03-04 ದಿನಾಂಕ:10.06.2003ನ್ನು ದಾಖಲು ಮಾಡಿಕೊಂಡು ವಶಪಡಿಸಿಕೊಂಡ ವಾಹನದ ಇಂಜಿನ್ ಸಂಖ್ಯೆ: ಕಾಣಿಸುತ್ತಿಲ್ಲ, ಚಾಸೀಸ್ ನಂ.:ಪ್ರೀಮಿಯರ್ ಎಕ್ಸ್‌ಪಿಎಂ. 801969:ಡಿ:1370:2897, ಎಂದಿರುತ್ತದೆಂದು, ಈ ಸಂಬಂಧ ಎರಡು ಜನ ವ್ಯಕ್ತಿಗಳು ತಪ್ಪಿಸಿಕೊಂಡಿರುತ್ತಾರೆ ಎಂಬುದಾಗಿ ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಹಾಗೂ ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುತ್ತಾರೆ. ಅದರಂತೆ ಸದರಿ ವಾಹನ ಮತ್ತು ಶ್ರೀಗಂಧವನ್ನು ಮುಂದಿನ ಆದೇಶದವರೆವಿಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಸರ್ಕಾರಿ ಶ್ರೀಗಂಧದ ಕೋಠಿ, ಹಾಸನರವರ ವಶಕ್ಕೆ ನೀಡಲಾಗಿತ್ತು.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ನೇ ಸೆಕ್ಷನ್ 71ಎ ಪ್ರಕಾರ 30 ದಿನಗಳ ಕಾಲಾವಕಾಶವನ್ನು ಕೊಟ್ಟು ವಾಹನದ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದಂತೆ, ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತು ಪಡಿಸುವುದು. ತಪ್ಪಿದಲ್ಲಿ ವಾಹನ ಹಾಗೂ ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಬಗ್ಗೆ ಪ್ರಕಟಣೆಯನ್ನು ದಿನಾಂಕ:04.12.2003ರ ಭಾಗ 6ಎ, ಪುಟ ಸಂಖ್ಯೆ:2971ರ ಕರ್ನಾಟಕ ರಾಜ್ಯ ಪತ್ರದಲ್ಲಿಯೂ, ಹಾಗೂ ದಿನಾಂಕ:06.12.2003ರಂದು ಜನಮಿತ್ರ ಕನ್ನಡ ದಿನಪತ್ರಿಕೆಯಲ್ಲೂ ಸಹ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರುರವರಲ್ಲಿ ಪತ್ರ ವ್ಯವಹರಿಸಿದಾಗ, ಅವರಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲ.

ಮುಂದುವರಿದು ಹಾಲಿ ವಾಹನದ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನಪಟ್ಟರೂ ಪತ್ತೆಯಾಗದೇ ಇರುವುದರಿಂದ, ಹಾಗೂ ಪ್ರಕಟಣೆಯಂತೆ 30 ದಿನಗಳ ಕಾಲಾವಕಾಶವು ದಿನಾಂಕ:07.01.2004ಕ್ಕೆ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಿಸಿದಂತೆ, ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ವಾಹನದ ವಾರಸುದಾರರು ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ಮಾಲೀಕತ್ವವನ್ನು ರುಜುವಾತು ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದಾಗಿ ಸಾಬೀತುಪಡಿಸಲು ವಿಫಲರಾದ ಕಾರಣ ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ, ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ ಹಾಗೂ ಈ ನ್ಯಾಯಾಲಯಕ್ಕೆ ಪ್ರಕರಣದ ಪಂಚನಾಮೆಯನ್ನು ಏಕೆ ನಂಬಬಾರದು ಎಂಬ ಪ್ರಶ್ನೆ ಉದ್ಭವಿಸಿರುವುದರಿಂದ ಹಾಗೂ ಪ್ರಕರಣದ ಪಂಚನಾಮೆಯನ್ನು ಯಾರೂ ಪ್ರಶ್ನಿಸಿಲ್ಲವಾದ್ದರಿಂದ, ದಿನಾಂಕ:10.06.2003 ರಂದು ಫಿಯಟ್ ಕಾರು ನಂ.ಕೆಎ-01-ಎಂ-5255ರಲ್ಲಿ ಅಕ್ರಮವಾದ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುವಲ್ಲಿ ತೊಡಗಿದ್ದವು: ನಿರತವಾದುದೆಂದು ದೃಢಪಟ್ಟಿರುವುದರಿಂದ ಈ ಕೆಳಗಿನಂತೆ ಆದೇಶಿಸಿದ್ದೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಎಂ.ಬಿ. ಭೀಮಯ್ಯ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಹಾಸನ ಆದ ನಾನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಒಂದು ಫಿಯಟ್ ಕಾರು ನಂ.ಕೆಎ-01-ಎಂ-5255 ಇಂಜಿನ್ ನಂ.ಕಾಣಿಸುತ್ತಿಲ್ಲ, ಚಾಸೀಸ್ ನಂ.ಪ್ರೀಮಿಯರ್:ಎಕ್ಸ್‌ಪಿಎಂ:801969:ಡಿ: 1370:2897, ಹಾಗೂ 150 ಕೆಜಿ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ

ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:08.01.2004 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ 30 ದಿನಗಳೊಳಗಾಗಿ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ:08.01.2004 ರಂದು ನನ್ನ ಆದೇಶದಂತೆ ಬೆರಳಚ್ಚು ಮಾಡಿಸಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿದ್ದೇನೆ.

ಎಂ.ಬಿ. ಭೀಮಯ್ಯ
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿ ದಳ, ಹಾಸನ.

ಪಿ.ಆರ್.245

**PROCEEDINGS OF THE OFFICE OF THE COMML. TAX OFFICER, 2 & 3 CIRCLE, BANGALORE**

**Present:** Smt T.K. Manjula
Comml. Tax Officer, 2 & 3 circle, B'lore.

**Name of the Dealer:** Popular Trading Co.,
No.69:4, Mosque Road, Jolly Mohalla, Bangalore-53.

**KST & CST No:** 75531940/ 75581942

**Sub:** Invalidation of Statutory forms like Form-39 & Form-32B issued to M/s Popular Trading Co., Reg.

**PREAMBLE:**

M/s. Popular Trading Co., were registered under the provisions of both KST & CST Act 1956 w.e.f. 9-12-1997 in this office. During the course of business the assessee have taken the following statutory forms from this office.

| I | Form 39 No. | No. of leaves | Date of issue from this office |
|---|---|---|---|
| From AA1/14 | 033901 to 033905 | 5 | 17-12-1997 |
| | 033906 to 033930 | 25 | 31-12-1997 |
| | 034066 to 034125 | 60 | 12-02-1998 |
| | 034251 to 034300 | 50 | 15.04.1998 |
| | 034451 to 034500 | 50 | 15-06-1998 |
| | 034676 to 034725 | 50 | 26-09-1998 |
| | 032776 to 032825 | 50 | 05-02-1999 |
| | | 290 | |
| II | Form 32-B declaration forms | | |
| B/26 | 010001 to B/26 010100 | 100 leaves | 15-06-1998 |

The assessee have declared the following turnover in his returns as below.

| Year | Total sales of Scrap | Tax admitted | Paid |
|---|---|---|---|
| 97-98 (As per Form-4) | 2,30,026-00 | Nil | Nil |
| 98-99 (As per Form-3) | 6,15,333-00 | Nil | Nil |
| 99-2000 (Till 1-2-2000) | Not filed returns | Nil | Nil |

The assessee have stopped filing monthly returns to this office since April 1999. On enquiry and other informations as available on the records it came to know that the dealer has left the business premises without leaving his where abouts. The then officer has cancelled the registration w.e.f 1-2-2000 vide order Dated:1-2-2000.

The assessee have not surrendered the un used above declaration forms to this office.

Later this office has received information from different circle offices and check posts (Computer sheets) that the assessee have effected the following sales/ purchase transaction for the respective years as below.

| | |
|---|---|
| For the year 97-98 | Rs. 18,21,988-00 |
| For the year 98-99 | Rs. 50,53,684-00 |
| For the year 99-2000 | Rs. 66,73,160-00 |

The Form-39 utilisation statement filed to this office by the assessee for the year 97-98 and 98-99 does not tally with the said turnover. Therefore it is clear that the assessee have misused the said statutory forms and the utilisation statement filed is bogus.

Under the above circumstances it is decided to invalid the said statutory declaration forms to prevent the misuse of the same and loss to the Government revenue. Hence the following order.

**Order No. CTO 2 & 3/ BCD III/ T. No. 316/2003-04 Dated:17th February, 2004**

In view of the above I Smt. T.K. Manjula C.T.O. 2 & 3 circle, BCD III, Bangalore, declare that the following statutory declaration forms.

| I | Form 39 No. | No. of leaves | Date of issue from this office |
|---|---|---|---|
| From AA1/14 | 033901 to 033905 | 5 | 17-12-1997 |
| | 033906 to 033930 | 25 | 31-12-1997 |
| | 034066 to 034125 | 60 | 12-02-1998 |
| | 034251 to 034300 | 50 | 15.04.1998 |
| | 03445 to 034500 | 50 | 15-06-1998 |
| | 034676 to 034725 | 50 | 26-09-1998 |
| | 032776 to 032825 | 50 | 05-02-1999 |
| | | 290 | |
| II Form 32-B declarations forms | | | |
| B/26 | 010001 to B/26 010100 | 100 leaves | 15-06-1998 |
| | are obsolete and Invalid. | | |

**FORMAT**

| 1) | Assessing Authority | C.T.O. 2 & 3 circle, BCD III<br>Abhaya Complex, Sheshadripuram Bangalore. | |
|---|---|---|---|
| 2) | Description of Forms | Form-39 | Form-32-B |
| | From AA1/ 14 | 033901 to 033905 | B/26 010001 to<br>B/26 010100 |
| | | 033906 to 033930 | |
| | | 034066 to 034125 | |
| | | 034251 to 034300 | |
| | | 03445 to 034500 | |
| | | 034676 to 034725 | |
| | | 032776 to 032825 | |
| | Total No. of Leaves | 290 | 100 |
| 3) | KST & CST No. | 75531940/ 75581942 | |

Commercial Tax Officer,
II & III Circle, Bangalore.

PR-246

**PROCEEDINGS OF THE OFFICE OF THE COMML. TAX OFFICER. 2 & 3 CIRCLE, BANGALORE**

**Present:** Smt T.K. Manjula
Comml. Tax Officer, 2 & 3 circle, B'lore.

**Name of the Dealer:** Popular Steel Supplies
No.163/A, 3rd Cross,
S.J.P. Road, Bangalore.

**KST & CST No:** 75531951/ 75581954

**Sub:** Invalidation of Statutory forms like Form-39, Form-32 Band Form-C issued to M/s Popular Steel Supplies. Reg.

**PREAMBLE:**

M/s. Popular Steel Supplies were registered under the provisions of both KST & CST Act 1956 w.e.f. 02-09-1997 in this office. During the course of business the assessee have taken the following statutory forms from this office.

| I | Form 39 No. | No. of leaves | Date of issue from this office |
|---|---|---|---|
| From | 033761 to 033775 | 15 | 27-10-1997 |
| | 033816 to 033875 | 60 | 10-12-1997 |
| | 033931 to 034025 | 95 | 12-01-1998 |
| | 034136 to 034200 | 65 | 17-03-1998 |
| | 034391 to 034450 | 60 | 29-05-1998 |
| | 034526 to 034550 | 25 | 24-06-1998 |
| | 034551 to 034600 | 50 | 17-07-1998 |
| | 032626 to 032675 | 50 | 29-12-1998 |

| II | Form-C declaration Forms | No. of leaves | Date of issue |
|---|---|---|---|
| | FF 62139 to FF 62143 | 5 leaves | 29-07-1998 |

| III | Form 32-B declaration Forms | | |
|---|---|---|---|
| | B/26 010101 to B/26 010150 | 50 leaves | 24-02-1999 |

The assessee have declared the following turnover in his returns as below.

| Year | Total sales of Scrap | Tax admitted | Paid |
|---|---|---|---|
| 97-98 (As per Form-4) | 99,338-00 | Nil | Nil |
| 98-99 (As per Form-3) | 6,16,392-00 | Nil | Nil |
| 99-2000 (Till 1-2-2000) | Not filed returns | Nil | Nil |

The assessee have stopped filing monthly returns to this office since April 1999. On enquiry and other informations as available on the records it came to know that the dealer has left the business premises without leaving his where abouts. The then officer has cancelled the registration w.e.f 1-2-2000 vide order Dated:1-2-2000.

The assessee have not surrendered the un used above declarations forms to this office.

Later this office has received information from different circle offices and check posts (Computer sheets) that the assessee have effected the following sales/ purchase transaction for the respective years as below.

For the year 97-98 : Rs. 35,49,686-00

For the year 98-99 : Rs. 1,11,52,587-00

The Form-39 utilisation statement filed to this office by the assessee for the year 97-98 and 98-99 does not tally with the said turnover. Therefore it is clear that the assessee have misused the said statutory forms and the utilisation statement filed is bogus.

Under the above circumstances it is decided to invalid the said statutory declaration forms to prevent the misuse of the same and loss to the Government revenue. Hence the following order.

**Order No. CTO 2 & 3/ BCD III/ T. No. 314/2003-04 Dated:17th February, 2004**

In view of the above I Smt. T.K. Manjula C.T.O. 2 & 3 circle, BCD III, Bangalore, declare that the following statutory declaration forms.

| I | Form 39 No. | No. of leaves | Date of issue from this office |
|---|---|---|---|
| From | 033761 to 033775 | 15 | 27-10-1997 |
| | 033816 to 033875 | 60 | 10-12-1997 |
| | 033931 to 034025 | 95 | 12-01-1998 |
| | 034136 to 034200 | 65 | 17-03-1998 |
| | 034391 to 034450 | 60 | 29-05-1998 |
| | 034526 to 034550 | 25 | 24-06-1998 |
| | 034551 to 034600 | 50 | 17-07-1998 |
| | 032626 to 032675 | 50 | 29-12-1998 |
| | | **420** | |

| II Form-C declaration Forms | No. of leaves | Date of issue |
|---|---|---|
| FF 62139 to FF 62143 | 5 leaves | 29-07-1998 |

| III Form 32-B declaration Forms | | |
|---|---|---|
| B 010101 to B 010150 | 50 leaves | 24-02-1999 |
| are obsolete and Invalid. | | |

**FORMAT**

| 1) | Assessing Authority | C.T.O. 2 & 3 circle, BCD III<br>Abhaya Complex, Sheshadripuram Bangalore. | | |
|---|---|---|---|---|
| 2) | Description of Forms | Form-39 | Form-C | Form-32-B |
| | | 033761 to 033775<br>033816 to 033875<br>033931 to 034025<br>034136 to 034200<br>034391 to 034450<br>034526 to 034550<br>034551 to 034600<br>032626 to 032675 | FF 62139<br>to FF 62143 | B/26 010101 to<br>B/26 010150 |
| | Total No. of leaves | 420 | 5 | 50 |
| 3) | KST & CST No. | 75531951/ 75581954 | | |

Commercial Tax Officer,
II & III Circle, Bangalore.

PR-247

**ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ,**

**ನಮೂನೆ-27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ರಸ್ತೆಯ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ,

ಈಗ, ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ರಸ್ತೆಯ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ರಸ್ತೆಯ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕುದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಹೆದ್ದಾರಿಯ ಹಕ್ಕಿನ ಜೊತೆಗೆ ಸದರಿ ರಸ್ತೆಯ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು, ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು; ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯುಟಿ ಕಮೀಷನರಿಗೆ ಬರಹದಲ್ಲಿ ತಿಳಿಸತಕ್ಕುದು, ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯುಟಿ ಕಮೀಷನರು ಪರಿಶೀಲಿಸತಕ್ಕುದು.

**ಅನುಸೂಚಿ**

| | |
|---|---|
| ರಸ್ತೆಯ ಭಾಗ ಇತ್ಯಾದಿ ಇರುವ ಗ್ರಾಮಗಳು | ಸೇವಾಲಾಲ್ ನಗರ (ತಿಮ್ಲಾಪುರ ತಾಂಡಾ) |
| ತಾಲ್ಲೂಕುಗಳು | ಹೊನ್ನಾಳಿ |
| ಜಿಲ್ಲೆ | ದಾವಣಗೆರೆ |
| ರಸ್ತೆಯ ಮೊದಲಾದುವರ ಭಾಗ ಅಥವಾ ಭಾಗಗಳ ವರ್ಣನೆ | ಸೇವಾಲಾಲ್ ನಗರ (ತಿಮ್ಲಾಪುರ ತಾಂಡಾ) ಸ.ನಂ. 16:14 ಮತ್ತು 17ರಲ್ಲಿ ಗ್ರಾಮಸ್ಥರು ಮತ್ತು ದನಕರುಗಳು ಗುಡ್ಡಕ್ಕೆ ಮತ್ತು ಗೋಕಟ್ಟೆಗೆ ಓಡಾಡಲು |
| ರಸ್ತೆಯ ಭಾಗ ಅಥವಾ ಭಾಗಗಳ ಸರಿಸುಮಾರು ವಿಸ್ತೀರ್ಣ | ಉಪಯೋಗಿಸುತ್ತಿದ್ದ ದಾರಿಯನ್ನು ನಕಾಶೆ ಕಂಡ ದಾರಿಯನ್ನಾಗಿ ನಿಗದಿಪಡಿಸುವ ಬಗ್ಗೆ. |
| ಮೇರೆ | |
| ಸಾರ್ವಜನಿಕ ರಸ್ತೆ/ಬೀದಿ/ಗಲ್ಲಿ/ದಾರಿ ಅಥವಾ ಅದರ ಭಾಗ | ಸೇವಾಲಾಲ್ ನಗರ (ತಿಮ್ಲಾಪುರ ತಾಂಡಾ) ಸ.ನಂ.16:14 ಮತ್ತು 17ರಲ್ಲಿ ಗ್ರಾಮಸ್ಥರು ಮತ್ತು ದನಕರುಗಳು ಗುಡ್ಡಕ್ಕೆ ಮತ್ತು ಗೋಕಟ್ಟೆಗೆ ಓಡಾಡಲು ಉಪಯೋಗಿಸುತ್ತಿದ್ದ ದಾರಿಯನ್ನು ನಕಾಶೆ ಕಂಡ ದಾರಿಯನ್ನಾಗಿ ಕಾಯ್ದಿರಿಸುವ ಬಗ್ಗೆ. |

ಜಿಲ್ಲಾಧಿಕಾರಿಗಳು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.226

**IN THE COURT OF COMMISSIONER FOR WORKMEN'S COMPENSATION, BIDAR**
**PROCLAMATION**
**No.LOB/WCA/Cr-52/2003**

| **Applicants:** | **V/s** | **Respondents:** |
|---|---|---|
| Aziz Miyan S/o<br>Yaseen Sab<br>Age:50 yrs. Occ: Labour<br>R/o Uamagi Tq: Aurad-B-District: Bidar.<br>& Others. | | 1. Shaik Jameel Gani<br>Age:Major, owner of V.No. MH-14/V-4928,<br>R/o Yamungar, Pune.<br>2. Oriental Insurance Co.Ltd., Pune. |

Sri Aziz Meeyan F/o Zameer R/o Uamagi Tq: Aurad-B- District: Bidar have/has filed application in this court claiming compensation stating that Late: Zameer was working as Driver Under the Respondent No. I he met with an accident arising out of and during the course of employment as a result he died on: 25.11.2003

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications or objections are received within the specified date the court will proceeded further in the matter.

COMMISSIONER FOR WORKMEN'S
COMPENSATION, BIDAR.

PR-249

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಧಾರವಾಡ ತಾಲ್ಲೂಕು, ಧಾರವಾಡ ಜಿಲ್ಲೆ**

**ಅಧಿಸೂಚನೆ**

**ಸಂಖ್ಯೆ: ತಾಸಕ:ಕಮಾಹಅ:2000-02:ಸಿಆರ್-03-04, ಧಾರವಾಡ, ದಿನಾಂಕ:12ನೇ ಫೆಬ್ರವರಿ, 2004**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 56 ಯೋಮಸ 02(1) ದಿನಾಂಕ:18.07.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ, ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1. ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1. | ಕಛೇರಿ ಅಧೀಕ್ಷಕರು | - 1 ಹುದ್ದೆ |
| 2. | ಪ್ರಥಮ ದರ್ಜೆ ಸಹಾಯಕರು | - 1 ಹುದ್ದೆ |
| 3. | ದ್ವಿತೀಯ ದರ್ಜೆ ಸಹಾಯಕರು | - 1 ಹುದ್ದೆ |
| 4. | ಬೆರಳಚ್ಚುಗಾರರು | - 1 ಹುದ್ದೆ |
| 5. | ಗ್ರೂಪ್ 'ಡಿ' ನೌಕರರು | - 1 ಹುದ್ದೆ |

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಾರ್ಯಾಲಯದ ಅಧೀನದಡಿಯಲ್ಲಿ ಬರುವ ಸಂಸ್ಥೆಗಳ ಹೆಸರು ಮತ್ತು ವಿವರ**

| | **ಸಂಸ್ಥೆಗಳ ಹೆಸರು** | **ಮಂಜೂರಾತಿ ಸಂಖ್ಯೆ** |
|---|---|---|
| 1. | ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಧಾರವಾಡ | 75 |
| 2. | ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ, ಧಾರವಾಡ | 100 |
| 3. | ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಅಳ್ನಾವರ | 40 |
| 4. | ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ, ಧಾರವಾಡ | 150 |
| 5. | ಮೆಟ್ರಿಕ್ ನಂತರದ ಬಾಲಕಿಯರ ವಸತಿ ನಿಲಯ, ಧಾರವಾಡ | 50 |

| | ಸಂಸ್ಥೆಗಳ ಹೆಸರು | ಮಂಜೂರಾತಿ ಸಂಖ್ಯೆ |
|---|---|---|
| 6. | ಸರ್ಕಾರಿ ವಸತಿ ಶಾಲೆ, ಧಾರವಾಡ | 125 |
| 7. | ಮಹಿಳಾ ಕಲ್ಯಾಣ ಕೇಂದ್ರ, ಧಾರವಾಡ | 50 |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪ.ಜಾತಿ.:ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಹೊಲಿಗೆ ಯಂತ್ರ
2. ಕಾನೂನು ಪದವೀಧರರಿಗೆ ಧನಸಹಾಯ.
3. ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು
4. ಕಟ್ಟಡಗಳ ನಿರ್ವಹಣೆ.
5. ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯ ವೇತನ
6. ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ
7. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ
8. ಪ್ರತಿಭಾ ವಿದ್ಯಾರ್ಥಿ ವೇತನ
9. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು
10. ಪ. ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ
11. ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ
12. ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಪೋಷಕರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ
13. 1 ರಿಂದ 4ನೇ ತರಗತಿಯ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ
14. ಅಸ್ಪೃಶ್ಯತಾ ನಿವಾರಣೆ
15. ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿಯವರಿಗೆ ಪರಿಹಾರ
16. ಜಾತಿ ಪರಿಶೀಲನೆ
17. ವಿಶೇಷ ಘಟಕ ಯೋಜನೆ
18. ಮೆಟ್ರಿಕ್ ನಂತರದ ಪರೀಕ್ಷೆಗಳಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಬಹುಮಾನ
19. 6 ರಿಂದ 7 ಹಾಗೂ 8 ರಿಂದ 10ನೇ ವರ್ಗದ ಪ.ಜಾತಿ: ಪ.ವರ್ಗದ ಹೆಣ್ಣು ಮಕ್ಕಳಿಗೆ ಪ್ರೋತ್ಸಾಹ ಧನ.

**2. ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ, ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯ ನಿರ್ವಾಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು: ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕರ್ತವ್ಯಗಳು:**

1. ತಾಲ್ಲೂಕಿನ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗಗಳ ಜನರ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.
2. ಪ್ರತಿ ತಿಂಗಳು ಕನಿಷ್ಟ ಪಕ್ಷ 15 ದಿನ ಪ್ರವಾಸ ಮಾಡುವುದು ಹಾಗೂ 10 ದಿನ ಹಳ್ಳಿಗಳಲ್ಲಿ ವಾಸ್ತವ್ಯ ಮಾಡುವುದು ಮತ್ತು ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಜನರ ಕಾಲೋನಿಗಳಿಗೆ ತಪ್ಪದೇ ಭೇಟಿ ನೀಡುವುದು.
3. ಇಲಾಖೆಯ ವಾರ್ಷಿಕ ಯೋಜನೆಯನ್ನು ತಯಾರಿಸಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಹಾಗೂ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳವರಿಂದ ಒಪ್ಪಿಗೆ ಪಡೆದು ಹಣ ಬಿಡುಗಡೆ ಮಾಡಿಸಿಕೊಳ್ಳುವುದು.
4. ತಾಲ್ಲೂಕಿನ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಮುಖ್ಯಸ್ಥರ ಕಾರ್ಯನಿರ್ವಹಣೆಯನ್ನು ಪರಿಶೀಲಿಸುವುದು ಹಾಗೂ ಕಾರ್ಯಾಲಯದ ಸಿಬ್ಬಂದಿಯವರ ಕೆಲಸಗಳನ್ನು ತಪಾಸಣೆ ಮಾಡುವುದು.
5. ಮೇಲಾಧಿಕಾರಿಗಳಿಗೆ ತಿಂಗಳ, 3 ತಿಂಗಳ, ಅರ್ಧ ವರ್ಷದ ಹಾಗೂ ವರ್ಷದಲ್ಲಿ ಸಾಧಿಸಿದ ಪ್ರಗತಿ ಪತ್ರಿಕೆಗಳನ್ನು ಸಲ್ಲಿಸುವುದು.
6. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ತಿಂಗಳ ಖರ್ಚಿನ ಮಾಹಿತಿ, ಪಿರಾಡಿಕಲ್ಸ್ ಮಾಹಿತಿ ಹಾಗೂ ಚೆಕ್ಕುಗಳ ಶಿಷ್ಯ ವೇತನ ಮಂಜೂರು ಮಾಡಿ ಚೆಕ್ ಅಕೌಂಟ್ಸ್ ಮಾಹಿತಿ ತಯಾರಿಸಿ ಸಲ್ಲಿಸುವುದು.
7. ತಾಲ್ಲೂಕಿನಲ್ಲಿಯ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಶಾಲೆಗಳಿಗೆ ಹೋಗುವ ಮಕ್ಕಳ ಮಾಹಿತಿಯನ್ನು ಹಾಗೂ ಮೂಲಭೂತ ಮಾಹಿತಿಯನ್ನು ತಯಾರಿಸಿ ಇಡುವುದು.

**ಶಿಕ್ಷಣ:**

8. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ 1 ರಿಂದ 10ನೇ ತರಗತಿಯ ಮೆಟ್ರಿಕ್ ಪೂರ್ವ ಶಿಷ್ಯ ವೇತನ ಹಾಗೂ ಮೆಟ್ರಿಕ್ ನಂತರದ ಶಿಷ್ಯ ವೇತನ ಮಂಜೂರು ಮಾಡುವುದು ಹಾಗೂ ಅದರ ಲೆಕ್ಕಪತ್ರ ಇಡುವುದು ಮತ್ತು ಶಿಷ್ಯ ವೇತನ ಹಂಚಿಕೆಯಾದ ಪಾವತಿಗಳನ್ನು ಇಡುವುದು

9. ತಾಲ್ಲೂಕಿನಲ್ಲಿಯ ಎಲ್ಲಾ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಪರಿವೀಕ್ಷಣೆ ಮಾಡುವುದಲ್ಲದೆ ಅನುದಾನಿತ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಸತಿ ನಿಲಯಗಳನ್ನು ವೀಕ್ಷಣೆ ಮಾಡುವುದು.
10. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ಪಾಸಾದ ವಿದ್ಯಾರ್ಥಿಗಳಿಗೆ ಬಹುಮಾನ ಹಣ ವಿತರಣೆ ಮಾಡುವುದು.
11. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಶಾಲೆಗೆ ಹೋಗುವ ಮಕ್ಕಳಿಗೆ ಪುಕ್ಕಟೆಯಾಗಿ ಕೊಡುವ ಸಮವಸ್ತ್ರ ಹಾಗೂ ಪಠ್ಯ ಪುಸ್ತಕಗಳನ್ನು ಹಾಗೂ ಇತರೆ ಶೈಕ್ಷಣಿಕ ಸಹಾಯವನ್ನು ಸರಿಯಾಗಿ ವಿತರಣೆ ಮಾಡಿದ್ದಾರೆಯೇ ಹೇಗೆ ಅನ್ನುವುದನ್ನು ಖಚಿತಪಡಿಸಿಕೊಳ್ಳುವುದು.
12. ಪರಿಶಿಷ್ಟ ಜಾತಿಯ ಜನರ ಕಾಲೋನಿಯಲ್ಲಿ ವಯಸ್ಕರ ಶಿಕ್ಷಣ ಯುವಜನ ಇಲಾಖೆ ಹಾಗೂ ಸಹಕಾರ ಇಲಾಖೆಯ ವತಿಯಿಂದ ಸಂಸ್ಥೆಗಳನ್ನು ಸ್ಥಾಪಿಸುವುದರಲ್ಲಿ ಸಹಕಾರ ನೀಡುವುದು.
13. ಶಿಕ್ಷಣ ಸಂಸ್ಥೆಗಳಲ್ಲಿ ಶಿಷ್ಯ ವೇತನ ಸರಿಯಾಗಿ ವಿತರಣೆ ಮಾಡಿದ ಬಗ್ಗೆ ಹಾಗೂ ಬುಕ್ ಬ್ಯಾಂಕ್ ಯೋಜನೆಯಲ್ಲಿ ನೀಡಿದ ಸವಲತ್ತುಗಳನ್ನು ಉಪಯೋಗಿಸಿದ ಬಗ್ಗೆ ತಪಾಸಣೆ ಮಾಡುವುದು.
14. ವಸತಿ ನಿಲಯಗಳ ಕಟ್ಟಡ ಕಟ್ಟುವುದು, ಸಮಾಜ ಮಂದಿರ ಕಟ್ಟುವುದು, ಕಲ್ಯಾಣ ಮಂದಿರ ಕಟ್ಟುವುದು ಹಾಗೂ ಶಾಲಾ ಕಟ್ಟಡ ಕಟ್ಟುವುದನ್ನು ಪರಿಶೀಲಿಸುವುದು ಹಾಗೂ ಕಾರ್ಯಗತ ಮಾಡುವುದು.
15. ಟಿ.ಎಸ್.ಪಿ. ಯೋಜನೆ ಹೊರತುಪಡಿಸಿ ಹುಡ್ಕೋ, ಎನ್‌ಆರ್‌ಇಪಿ, ಪಿಎಲ್‌ಬಿಆರ್, ಎಲ್‌ಸಿಎಚ್ ಯೋಜನೆ ಅಡಿಯಲ್ಲಿ ಯೋಗ್ಯ ಫಲಾನುಭವಿಗಳನ್ನು ಗುರುತಿಸುವುದು ಹಾಗೂ ಆಯ್ಕೆ ಮಾಡಿ ಸಂಬಂಧಿಸಿದ ಇಲಾಖೆಗೆ ಒದಗಿಸುವುದು.
16. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಜನರ ಮೇಲೆ ನಡೆದ ದೌರ್ಜನ್ಯ ಪ್ರಕರಣಕ್ಕೆ ಸಂಬಂಧಿಸಿದಂತೆ ಸಿಆರ್ ಸೆಲ್ಲಿನ ಅಧಿಕಾರಿಗಳೊಂದಿಗೆ ಸಹಕರಿಸುವುದು ಹಾಗೂ ತಾಲ್ಲೂಕು ಮಟ್ಟದ ನಾಗರೀಕ ಹಕ್ಕು ಸಂರಕ್ಷಣಾ ಸಮಿತಿಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುವುದು.
17. ನೈಸರ್ಗಿಕವಾಗಿ ಲುಕ್ಸಾನು ಹಾಗೂ ಬೆಂಕಿ ಅನಾಹುತದಲ್ಲಿ ನೊಂದ ಫಲಾನುಭವಿಗಳಿಗೆ ಧನಸಹಾಯ ಮಾಡುವಲ್ಲಿ ಪ್ರಯತ್ನಿಸುವುದು.
18. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಜನರ ಸಲುವಾಗಿ ಮನೆ, ಜಾಗೆ, ಸ್ಮಶಾನ ಜಾತೆ, ಈಗಿನ ಕಾಲೋನಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ಪ್ರತ್ಯೇಕ ಕಾಲೋನಿ ನಿರ್ಮಾಣ ಬಗ್ಗೆ, ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಕಟ್ಟಡ ನಿರ್ಮಾಣ ಬಗ್ಗೆ ಭೂಮಿ ಖರೀದಿ ಬಗ್ಗೆ, ಪ್ರಕರಣಗಳನ್ನು ತಯಾರಿಸುವುದು. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಜನರಿಗೆ ಮನೆಗಳ ನಿರ್ಮಾಣ ಮಾಡಲು ಮಂಜೂರಾದ ಭೂಮಿಯನ್ನು ಹಾಗೂ ಲೀಜ್ ಮೇಲೆ ಕೊಟ್ಟ ಭೂಮಿಯನ್ನು ವಶಪಡಿಸಿಕೊಳ್ಳುವ ಕ್ರಮ ಜರುಗಿಸುವುದು. ಸರಕಾರಿ ಗಾಂವಠಾಣ ಜಾಗೆಯನ್ನು ಅಭಿವೃದ್ಧಿಪಡಿಸಲು ಮತ್ತು ಮನೆ ಕಟ್ಟಲು ಕಂದಾಯ ಇಲಾಖೆಯಿಂದ ಪಡೆದುಕೊಳ್ಳುವ ಕ್ರಮ ಜರುಗಿಸುವುದು.

**ಆರ್ಥಿಕ ಮತ್ತು ಅಭಿವೃದ್ಧಿ:**

19. ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಜನರ ಒಕ್ಕಲುತನ ಕಾಲೋನಿಗಳನ್ನು ನಿರ್ವಹಿಸುವುದು ಹಾಗೂ ಜಾಯಿಂಟ್ ಫಾರ್ಮ್, ಕೈಗಾರಿಕೆ, ಕೂಲಿಕಾರ ಸಹಕಾರಿ ಸಂಘಗಳನ್ನು ಅವರ ಅನುಕೂಲಕ್ಕಾಗಿ ಮಾಡುವುದು.
20. ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಸೋಷಿಯಲ್ ಹಾಗೂ ಎಕನಾಮಿಕ್ ಸರ್ವೆ ಮಾಡಿ ಫಲಾನುಭವಿಗಳನ್ನು ವಿಶೇಷ ಘಟಕ ಯೋಜನೆ:ಐಆರ್‌ಡಿಪಿ:ಟಿಎಸ್‌ಪಿ: ಅಂತ್ಯೋದಯ:ಟ್ರಾಯಜಂ ಯೋಜನೆಗಳ ಸಾಮಾಜಿಕ ಆರ್ಥಿಕ ಸಮೀಕ್ಷೆ ಕೈಕೊಳ್ಳುವುದು.
21. ಭೂ ರೈತ ಕಾರ್ಮಿಕರನ್ನು ಗುರುತಿಸುವುದು.
22. ಸ್ಥಳೀಯ ಸಂಸ್ಥೆಗಳಲ್ಲಿ ಕಾಯ್ದಿರಿಸಿದ ಶೇಕಡಾ 18 ಹಣದಲ್ಲಿ ಯೋಜನೆಗಳನ್ನು ಕಾರ್ಯಗತ ಮಾಡುವುದು.
23. ಅಂತರಜಾತಿ ವಿವಾಹವಾದ ದಂಪತಿಗಳಿಗೆ ಸಹಾಯಧನ ಮಂಜೂರಿ ಕುರಿತು ಪ್ರಕರಣ ತಯಾರಿಸುವುದು.
24. ಪರಿಶಿಷ್ಟ ಜಾತಿಯ ಜನರ ವಾಸದ ಮನೆಗಳಿಗೆ ಹಾಗೂ ಕಾಲೋನಿಗೆ ವಿದ್ಯುತ್ ಪೂರೈಕೆ ಕುರಿತು ಹಾಗೂ ಕುಡಿಯುವ ನೀರಿನ ಪೂರೈಕೆ ಕುರಿತು ಸಮೀಕ್ಷೆ ಮಾಡುವುದು.
25. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಜನರು ಯಾರು ವೃದ್ಧಾಪ್ಯ ವೇತನ, ವಿಧವಾ ವೇತನ, ಹೆರಿಗೆ ಭತ್ಯೆ, ಅಂಗವಿಕಲರ ಭತ್ಯೆ ಮತ್ತು ಕ್ರಾನಿಕ್ ರೋಗದಿಂದ ಬಳಲುವವರು ಇಂತಹ ಫಲಾನುಭವಿಗಳನ್ನು ಗುರುತಿಸಿ ಸಂಬಂಧಿಸಿದ ಅಧಿಕಾರಿಗಳಿಗೆ ಭೇಟಿಯಾಗಿ ಮಂಜೂರಿಸುವುದು.
26. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಜನರು ತಮ್ಮ ಭೂಮಿಗಳನ್ನು ಮರಳಿ ಪಡೆಯುವಲ್ಲಿ ಸಹಾಯ ಮಾಡುವುದು ಹಾಗೂ ಭೂಮಿ ಮಂಜೂರಿಯಲ್ಲಿಯೂ ಸಹಾಯ ಮಾಡುವುದು.

**ಇತರೆ:**

27. ಸರ್ಕಾರಿ ಇಲಾಖೆ, ಅರೆ ಸರ್ಕಾರಿ ಇಲಾಖೆ, ಸ್ಥಳೀಯ ಸಂಸ್ಥೆ ಮತ್ತು ಔದ್ಯೋಗಿಕಗಳಲ್ಲಿ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಅಭ್ಯರ್ಥಿಗಳನ್ನು ಸರ್ಕಾರಿ ನಿಯಮಾವಳಿ ಪ್ರಕಾರ ನೇಮಕಾತಿ ಮಾಡಿದ ಬಗ್ಗೆ ಪರಿಶೀಲನೆ ಮಾಡಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ವರದಿ ಸಲ್ಲಿಸುವುದು.
28. ಇತರೆ ಇಲಾಖೆಯಿಂದ ಜಾತಿ ಪರಿಶೀಲನೆ ಅಂತಾ ಬಂದ ಜಾತಿ ಪ್ರಮಾಣ ಪತ್ರಗಳ ಸಿಂಧುತ್ವವನ್ನು ಪರಿಶೀಲನೆ ಮಾಡುವುದು.

29. ಸರ್ಕಾರಿ ಸಂಘಗಳಲ್ಲಿ ಯೂತ್ ಕ್ಲಬ್‌ಗಳಲ್ಲಿ ಮಹಿಳಾ ಮಂಡಳಿಗಳಲ್ಲಿ ಸ್ಥಳೀಯ ಅಭಿವೃದ್ಧಿ ಬ್ಯಾಂಕ್‌ಗಳಲ್ಲಿ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಜನರು ಸದಸ್ಯತ್ವ ಹೊಂದಲು ಪ್ರೋತ್ಸಾಹಿಸುವುದು.

30. ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್: ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು: ಜಿಲ್ಲಾ ಪಂಚಾಯತ್ ಅಧಿಕಾರಿಗಳು ಹಾಗೂ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ರವರು ವಹಿಸುವ ಯಾವುದೇ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು.

**3. ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯ ನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ, ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**3. ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು: ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**4. ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ.ಘ.ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು,
ಧಾರವಾಡ ತಾಲ್ಲೂಕು,
ಧಾರವಾಡ ಜಿಲ್ಲೆ.

ಪಿ.ಆರ್.252

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಶಿಗ್ಗಾಂವ ತಾಲ್ಲೂಕು, ಹಾವೇರಿ ಜಿಲ್ಲೆ**

**ಸಂಖ್ಯೆ: ತಾಸಕ:ಸಿಆರ್:2003-04, ಶಿಗ್ಗಾಂವ, ದಿನಾಂಕ:10ನೇ ಫೆಬ್ರವರಿ, 2004**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 56 ಯೋಮಸ 02(1) ದಿನಾಂಕ:18.07.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ, ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1. ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1. ಕಛೇರಿ ಅಧೀಕ್ಷಕರು - 1 ಹುದ್ದೆ
2. ಪ್ರಥಮ ದರ್ಜೆ ಸಹಾಯಕರು - 1 ಹುದ್ದೆ
3. ದ್ವಿತೀಯ ದರ್ಜೆ ಸಹಾಯಕರು - 1 ಹುದ್ದೆ
4. ಬೆರಳಚ್ಚುಗಾರರು - 1 ಹುದ್ದೆ
5. ಗ್ರೂಪ್ 'ಡಿ' ನೌಕರರು - 1 ಹುದ್ದೆ

**ಈ ಕಾರ್ಯಾಲಯದ ಅಧೀನದಲ್ಲಿ ಈ ಕೆಳಗಿನಂತೆ ಸಂಸ್ಥೆಗಳು ಬರುತ್ತವೆ.**

1. ಸರ್ಕಾರಿ ಸಾರ್ವಜನಿಕ ಮೆ. ಪೂ, ಬಾಲಕರ ವಸತಿ ನಿಲಯ, ಶಿಗ್ಗಾಂವ.
2. ಸರ್ಕಾರಿ ಸಾರ್ವಜನಿಕ ಮೆ. ಪೂ, ಬಾಲಕಿಯರ ವಸತಿ ನಿಲಯ, ಶಿಗ್ಗಾಂವ.
3. ಸರ್ಕಾರಿ ಸಾರ್ವಜನಿಕ ಬಾಲಕಿಯರ ವಸತಿ ನಿಲಯ ಬಂಕಾಪೂರ
4. ಸರ್ಕಾರಿ, ಪ.ಪಂ. ಮೆ. ಪೂ. ಬಾಲಕರ ವಸತಿ ನಿಲಯ ಹಿರೇಬೆಂಡಿಗೇರಿ
5. ಸರ್ಕಾರಿ ಮೆ. ಪೂ. ಬಾಲಕರ ವಸತಿ ನಿಲಯ ತಡಸ
6. ಸರ್ಕಾರಿ ಪ.ಪಂ. ಬಾಲಕರ ವಸತಿ ನಿಲಯ ಅತ್ತಿಗೇರಿ
7. ಸರ್ಕಾರಿ ಸಾರ್ವಜನಿಕ ಆಶ್ರಮ ಶಾಲೆ ಶಿಗ್ಗಾಂವ.

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಪ.ಜಾತಿ.:ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಶೈಕ್ಷಣಿಕ ಮತ್ತು ಆರ್ಥಿಕ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಕಾನೂನು ಪದವೀಧರರಿಗೆ ಧನ ಸಹಾಯ.
2. ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರ.
3. ಮೆಟ್ರಿಕ್ ನಂತರದ ಪ.ಜಾ:ಪ.ವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ.
4. ಪ್ರಥಮ ಯತ್ನದಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದ ಪ.ಜಾ:ಪ.ವರ್ಗ ವಿದ್ಯಾರ್ಥಿಗಳಿಗೆ ಬಹುಮಾನ ಹಣ ಎಸ್.ಸಿ:ಎಸ್.ಟಿ: ವಿದ್ಯಾರ್ಥಿಗಳಿಗೆ.
5. ಪ.ಜಾತಿ:ಪ.ವರ್ಗ ವಿದ್ಯಾರ್ಥಿಗಳಿಗೆ ಶಿಷ್ಯವೇತನ.
6. ಪ.ಜಾತಿ:ಪ.ವರ್ಗ ವಿದ್ಯಾರ್ಥಿಗಳಿಗೆ ಪ್ರತಿಭಾ ವಿದ್ಯಾರ್ಥಿವೇತನ.
7. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು.
8. 1 ರಿಂದ 5ನೇ ತರಗತಿ ವಿದ್ಯಾರ್ಥಿಗಳಿಗೆ ವಸತಿ ಶಾಲೆ ಸೌಲಭ್ಯ.
9. ಅನೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವ ಪಾಲಕರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ.
10. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗ 1 ರಿಂದ 5ನೇ ತರಗತಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ.
11. ಅಸ್ಪೃಶ್ಯತಾ ನಿವಾರಣೆ ಕಾರ್ಯಕ್ರಮಗಳ ಅನುಷ್ಠಾನ.
12. ಜಾತಿ ಪರಿಶೀಲನೆ.
13. ವಿಶೇಷ ಘಟಕ ಯೋಜನೆ ಕಾರ್ಯಕ್ರಮಗಳ ಅನುಷ್ಠಾನ.
14. ಗಿರಿಜನ ಉಪಯೋಜನೆಯಡಿ ಕಾರ್ಯಕ್ರಮಗಳ ಅನುಷ್ಠಾನ.
15. 6,7ನೇ ತರಗತಿ ಪ.ಜಾತಿ ಬಾಲಕಿಯರಿಗೆ ಪ್ರೋತ್ಸಾಹ ಶಿಷ್ಯ ವೇತನ.
16. 8 ರಿಂದ 10ನೇ ತರಗತಿ ಪ.ಜಾತಿ: ಪ.ಪಂ. ಬಾಲಕಿಯರಿಗೆ ಪ್ರೋತ್ಸಾಹ ಶಿಷ್ಯ ವೇತನ.
17. ಪ್ರಥಮ ಯತ್ನದಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿರುವ ಪ.ಜಾ., ಪ.ವ. ಕಾಲೇಜು ವಿದ್ಯಾರ್ಥಿಗಳಿಗೆ ಬಹುಮಾನ ಹಣ.
18. ಅಂತರ್‌ಜಾತಿ ವಿವಾಹವಾದ ದಂಪತಿಗಳಿಗೆ ಪ್ರೋತ್ಸಾಹ ಧನ.

**2. ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ, ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯ ನಿರ್ವಾಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

**1) ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕರ್ತವ್ಯಗಳು:** ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಜಾಬ್ ಚಾರ್ಟ್ ಪ್ರತಿ ಲಗತ್ತಿಸಿದೆ.

**2) ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿಯವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವುದು ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೋಂದಾಯಿಸಿ ಸಂಬಂಧಪಟ್ಟ ನಿರ್ದೇಶಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವುದು.

**1. ಇಲಾಖೆಯು ತನ್ನ ಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿದ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳು ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ನಿರ್ವಹಿಸುವುದು.
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಡಿ ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸಮಾಜ ಕಲ್ಯಾಣ ಇಲಾಖೆಯ ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**4. ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ.ಘ.ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸುವೆ.

ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು,
ಶಿಗ್ಗಾಂವ ತಾಲ್ಲೂಕು,
ಹಾವೇರಿ ಜಿಲ್ಲೆ.

**JOB CHART OF TALUK SOCIAL WELFARE OFFICERS**
**(G.O. No. SWL.293 SET 87 Dated:19th September, 1987)**

**Basic functions:**

1. To work as liaison and implementing/ Executive Officer for the welfare of SC/STs in the taluk.
2. To tour not less than 15 days with 10 night halts and they must specifically visit harijan basthis.
3. To prepare detailed annual Action plan of various programmes for the welfare SC/STs in the taluk and submit to the Deputy Commissioners and District Social Welfare Officer of the districts for sanction of grants.
4. To supervise the work of head of Social Welfare institutions in the taluk including table inspection of office staff.
5. To send monthly, quarterly, half yearly and annual progress reports.
6. To send monthly expenditure statements and cheque account statements to the District Social Welfare Officer.
7. To Conduct survey of SC/STs children attending schools and maintain basic statistics of the taluk.

**Education:**

8. To Sanction prematric and postmatric scholarships to SC/STs students studying from V to X Std. including maintenance of Accounts/ Acquittance.

9. To maintain all Social Welfare institutions in the taluk and supervise all Grant-in-aid hostels both Pre-matric and Post-matric.

10. To disburse award of prize money to the SSLC students who secure I Class in first attempt.

11. To ensure proper distribution of free uniforms, text books, and other educational aids to SC/STs School going children.

12. To Co-operate with Adult Education, Youth Services and Co-operative Departments for starting their agencies in harijan basthis.

13. To Supervise proper distribution of scholarship in the institutions including establishment of Book Banks.

**Health & Housing:**

14. To supervise, implement construction of hostel buildings, community centre buildings, kalyan mandira, school buildings.

15. To identify, select and sponsor the names of eligible beneficiaries under HUDCO, NREP, PLGP, LCH to various implementing departments except under TSP.

16. To Co-operate with officials/officers of CPE Cell to remedy the atrocities on SC/STs and he will be Member Secretary for protection and safe guard of the Taluk level Committee.

17. To provide financial assistance to the victims of fire accidents and other natural calamities.

18. To initiate all land acquitions cases Pertaining to grant of house sites, burial grounds, establishment and extension of existing colonies, construction of buildings for location of Social Welfare Institutions. Take possession of lands acquired leased, alienated for distribution of house sites to SC/STs people. To secure Government waste lands from revenue authorities for development and distribution of house sites.

**Economic Development:**

19. To maintain Agricultural colonies of SC/STs organize establishment of Joint farming, industrial, labour and service Co-operative societies for the betterment of these people.

20. To conduct socio/economic survey and identify beneficiaries under SCP/IRDP/TSP/Anthyodaya/ TRYSEM/Tali Bhagya/ IRDP/Ganga Kalyan/Bhagya Jyothi/Negilu Bhagya as also sponser and implement the programmes for the welfare of SC/STs in the taluk.

21. To identify, rehabilitate released bonded labourers.

22. To implement various schemes under 18 % funds of local bodies.

23. To build up records to provide Financial Assistance to the persons contracting under intercaste marriage.

24. To conduct survey for providing drinking water, electricity to harijan Basthis and Residential houses.

25. To identify SC/STs persons eligible for old age pension, widow pension, maternity benefits, pension for physically handicapped and persons suffering from chronic diseases and approach concerned authorities for relief.

26. To assist SC/STs to get their lands restored wherever the lands are aliented. This will include regrant also.

**Others:**

27. To review the implementation of Government orders relating to reservation and filling up of vacancies in favour of SC/STs in various Government Departments, Quasi Government Department, Local Bodies, Companies of Industrial concerns including Banks and report to District Social Welfare Officer.

28. To verify the genuinity of caste certificates referred by various agencies.

29. To encourage enrollment of members in Co-operative, youth clubs, Mahila Mandals, Land Development Banks etc.

30. Any work entrusted by District and State Officers including Zilla Parishats.

Under Secretary to Government,
Social Welfare & Labour Department.

PR-253

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1 ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ:6/ಸಂ.ವಿ/ಸಿ.ಓ.ಪಿ/2004, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ, 2004**

ಬೆಂಗಳೂರು ನಗರದ ಹೃದಯ ಭಾಗದ ಪ್ರಮುಖ ರಸ್ತೆಗಳಲ್ಲಿ ಒಂದಾದ ನರಸಿಂಹರಾಜ ರಸ್ತೆ, ಎಸ್.ಜೆ.ಪಿ ರಸ್ತೆ ಹಾಗೂ ಟೌನ್‌ಹಾಲ್ ವೃತ್ತದ ಸುತ್ತಮುತ್ತಲಿನ ರಸ್ತೆಗಳಲ್ಲಿ ವಾಹನಗಳ ಸಂಚಾರ ಸಾಂದ್ರತೆಯು ಹೆಚ್ಚಾಗಿರುವ ಕಾರಣ ಸಾರ್ವಜನಿಕರು ಸ್ಥಳದಿಂದ ಸ್ಥಳಕ್ಕೆ ಸರಾಗವಾಗಿ ಸಾಗಿ ಹೋಗಲು ತೊಂದರೆಯಾಗುತ್ತಿರುತ್ತದೆ. ಇದರ ನಿವಾರಣೆಗೆ ಹಾಗೂ ಸುಗಮ ವಾಹನ ಸಂಚಾರ ವ್ಯವಸ್ಥೆಗೊಳಿಸುವ ಸಲುವಾಗಿ, ಕೆಲವೊಂದು ರಸ್ತೆಗಳಲ್ಲಿ ಸಂಚಾರವನ್ನು ನಿರ್ಬಂಧಿಸಿ ಏಕಮುಖ ಸಂಚಾರ ವ್ಯವಸ್ಥೆ ಜಾರಿಗೊಳಿಸುವುದು ಸಾರ್ವಜನಿಕರ ಸುರಕ್ಷತೆ ಹಾಗೂ ಅನುಕೂಲಕ್ಕಾಗಿ ಅನಿವಾರ್ಯವಾಗಿದೆ.

ಆದುದರಿಂದ ನರಸಿಂಹರಾಜ ರಸ್ತೆ, ಓ.ಟಿ.ಸಿ. ರಸ್ತೆ, ಎಸ್.ಜೆ.ಪಿ ರಸ್ತೆಗಳಲ್ಲಿ ಪ್ರಾಯೋಗಿಕವಾಗಿ ಬದಲಾವಣೆಗಳನ್ನು ಮಾಡಿ ಓ.ಟಿ.ಸಿ. ರಸ್ತೆ (ಪೈ ಹೋಟೆಲ್ ರಸ್ತೆ) ಯಲ್ಲಿ ಏಕಮುಖ ಸಂಚಾರದ ವ್ಯವಸ್ಥೆಯನ್ನು ಜಾರಿಗೆ ತಂದು ಇದರಿಂದಾಗುವ ಸಾಧಕ ಭಾದಕಗಳನ್ನು ಅಭ್ಯಸಿಸಲು ಉದ್ದೇಶಿಸಿದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ವಾಹನಗಳ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. ಎನ್.ಆರ್. ವೃತ್ತದ ಎಲ್.ಐ.ಸಿ. ಕಟ್ಟಡದ ಮುಂಭಾಗದಲ್ಲಿರುವ ವೃತ್ತವನ್ನು ನವೀಕರಿಸಿ ಹಡ್ಸನ್ ವೃತ್ತದಿಂದ ಬಂದಂತಹ ವಾಹನಗಳು ಓ.ಟಿ.ಸಿ. ರಸ್ತೆ (ಪೈ ಹೋಟೆಲ್ ರಸ್ತೆ) ಗೆ ಹೋಗುವುದನ್ನು ನಿಷೇಧಿಸಲಾಗಿದೆ.
2. ಎನ್.ಆರ್. ವೃತ್ತದ ಬಳಿ ಬಂದು ಬಲತಿರುವು ತೆಗೆದುಕೊಂಡು ಮಿಷನ್ ರಸ್ತೆಯ ಕಡೆಗೆ ಹೋಗುವ ಎಲ್ಲಾ ರೀತಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ.
3. ಎಸ್.ಜೆ.ಪಿ. ರಸ್ತೆಯಿಂದ ಬಂದಂತಹ ಎಲ್ಲಾ ವಾಹನಗಳು ಎಸ್.ಜೆ.ಪಿ. ರಸ್ತೆಯ ಯಲ್ಲಮ್ಮ ಆಸ್ಪತ್ರೆಯ ಬಳಿ ಎಡ ತಿರುವು ತೆಗೆದುಕೊಂಡು ಹಾಗೆಯೇ ಮುಂದೆ ಸಾಗಿ ಪೈಲ್ವಾನ್ ಕೃಷ್ಣಪ್ಪ ರಸ್ತೆಯ ಮತ್ತು ಓ.ಟಿ.ಸಿ ರಸ್ತೆಯ ಜಂಕ್ಷನ್ ಬಳಿ ಬಲ ತಿರುವು ತೆಗೆದುಕೊಂಡು ಮಿಷನ್ ರಸ್ತೆ ಮತ್ತು ಹಲಸೂರು ಗೇಟ್ ಪೊಲೀಸ್ ಠಾಣೆಯ ಹಾಗೂ ಹಡ್ಸನ್ ವೃತ್ತದ ಕಡೆಗೆ ಸಾಗಬಹುದಾಗಿರುತ್ತದೆ. ಮತ್ತು ಓ.ಟಿ.ಸಿ. ರಸ್ತೆಯಲ್ಲಿ ಪೈ ಹೋಟೆಲ್ ಕಡೆಯಿಂದ ಪೈಲ್ವಾನ್ ಕೃಷ್ಣಪ್ಪ ರಸ್ತೆ ಜಂಕ್ಷನ್ ಕಡೆಗೆ ಬರುವಂತಹ ಎಲ್ಲಾ ರೀತಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. ಸದರಿ ರಸ್ತೆಯಲ್ಲಿದ್ದ ಪಾರ್ಕಿಂಗ್ ವ್ಯವಸ್ಥೆಯನ್ನು ಹಾಗೆಯೇ ಮುಂದುವರಿಸಲಾಗಿದೆ.
4. ಹಡ್ಸನ್ ವೃತ್ತದಿಂದ ಬಂದಂತಹ ವಾಹನಗಳು ನಗರತ್‌ಪೇಟೆ ಹಾಗೂ ಎಸ್.ಪಿ. ರಸ್ತೆಯನ್ನು ಸೇರಲು ಟೌನ್ ಹಾಲ್ ವೃತ್ತದ ಮೂಲಕ ಬಂದು ಕಾಮತ್ ಹೋಟೆಲ್ ಮುಂಭಾಗ ಬಲತಿರುವು ತೆಗೆದುಕೊಂಡು ಪೈಲ್ವಾನ್ ಕೃಷ್ಣಪ್ಪ ರಸ್ತೆಯ ಮುಖಾಂತರ ಎಸ್.ಪಿ. ರಸ್ತೆ, ನಗರತ್‌ಪೇಟೆ ಮುಖ್ಯ ರಸ್ತೆಗಳಿಗೆ ಸೇರಬಹುದಾಗಿದೆ. ಪೈಲ್ವಾನ್ ಕೃಷ್ಣಪ್ಪ ರಸ್ತೆಯಲ್ಲಿ ನೀಡಲಾಗಿರುವ ಪಾರ್ಕಿಂಗ್ ವ್ಯವಸ್ಥೆಯನ್ನು ನಿಷೇಧಿಸಲಾಗಿದ್ದು, ಕ್ರಾಸ್ ರಸ್ತೆಯಲ್ಲಿ ಪಾರ್ಕಿಂಗ್ ವ್ಯವಸ್ಥೆಯನ್ನು ಕಲ್ಪಿಸಿಕೊಡಲಾಗಿದೆ.

ಅಂತೆಯೇ 1988ರ ಮೋಟಾರ್ ವಾಹನ ಕಾಯ್ದೆ ಕಲಂ 116 ಹಾಗೂ 1960ರ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್‌ನ ಕಲಂ 4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:21.02.2004 ರಿಂದ ಪ್ರಾಯೋಗಿಕವಾಗಿ ಒಂದು ತಿಂಗಳ ಕಾಲ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:16.02.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

ಪಿ.ಆರ್.254

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1 ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ:08/ಸಂ.ವಿ/ಸಿ.ಓ.ಪಿ/2004, ಬೆಂಗಳೂರು, ದಿನಾಂಕ:20ನೇ ಫೆಬ್ರವರಿ, 2004**

ಬೆಂಗಳೂರು ಮಹಾನಗರ, ಮಡಿವಾಳ ಪೊಲೀಸ್ ಠಾಣೆಯ ಸರಹದ್ದಿಗೆ ಸೇರಿದ ಹೊಸೂರು ರಸ್ತೆ ಮತ್ತು ಬೇಗೂರು ರಸ್ತೆ ಜಂಕ್ಷನ್‌ನಿಂದ ಬೇಗೂರು ಮುಖ್ಯರಸ್ತೆಯಲ್ಲಿ ದೇವರಚಿಕ್ಕನಹಳ್ಳಿ ರಸ್ತೆಯ ಜಂಕ್ಷನ್ ವರೆಗೆ ಉತ್ತರದಿಂದ ದಕ್ಷಿಣದ ಕಡೆಗೆ ಹಾಯ್ದು ಹೋಗುವ ದ್ವಿಮುಖ ಸಂಚಾರ ವ್ಯವಸ್ಥೆಯ ರಸ್ತೆಯಾಗಿದ್ದು ಸದರಿ ರಸ್ತೆಯ ಅಗಲವು ಕಿರಿದಾಗಿದ್ದು ರಸ್ತೆಯ ಇಕ್ಕೆಲಗಳಲ್ಲಿ ವಾಣಿಜ್ಯ ಮಳಿಗೆಗಳು, ವಾಸ್ತವ್ಯದ ಮಳಿಗೆಗಳು ಮತ್ತು ಅಂಗಡಿ ಮಳಿಗೆಗಳು ವ್ಯಾಪಿಸಿದ್ದು ಸಾರ್ವಜನಿಕರ ಸಂಚಾರವು ಸಹ ಅತ್ಯಧಿಕವಾಗಿದ್ದು ಇತ್ತೀಚಿನ ಕೇಂದ್ರ ರೇಷ್ಮೆ ಮಂಡಳಿ ವೃತ್ತದಲ್ಲಿನ ಮೇಲು ಸೇತುವೆಯು ಪ್ರಾರಂಭವಾದ ನಂತರ ಸದರಿ ರಸ್ತೆಯ ಮೂಲಕ ಭಾರೀ ಸರಕು ಸಾಗಾಣಿಕೆ ವಾಹನಗಳ ಸಂಚರಣೆಯು ಅತ್ಯಧಿಕವಾಗಿದ್ದು ಸಾರ್ವಜನಿಕರ ಸಂಚಾರಕ್ಕೆ ತೀವ್ರತರಹದ ಅಡಚಣೆಯಾಗುತ್ತಿರುವ ಹಿನ್ನೆಲೆಯಲ್ಲಿ ಬೇಗೂರು ರಸ್ತೆಯಲ್ಲಿ ಬೆಳಿಗ್ಗೆ 7-00 ಗಂಟೆಯಿಂದ 11-00 ಗಂಟೆವರೆಗೆ ಮತ್ತು ಸಾಯಂಕಾಲ 4-30 ಗಂಟೆಯಿಂದ ರಾತ್ರಿ 8-30 ಗಂಟೆವರೆವಿಗೆ ಭಾರೀ ಸರಕು ಸಾಗಾಣಿಕೆ ವಾಹನಗಳ ಸಂಚಾರವನ್ನು ನಿಷೇಧಿಸುವುದು ಅವಶ್ಯಕವಾಗಿ ಕಂಡುಬಂದಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ವಾಹನಗಳ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. ಹೊಸೂರು ರಸ್ತೆ ಮತ್ತು ಬೇಗೂರು ರಸ್ತೆ ಜಂಕ್ಷನ್‌ನಿಂದ ಬೇಗೂರು ಮುಖ್ಯ ರಸ್ತೆಯಲ್ಲಿ ದೇವರ ಚಿಕ್ಕನಹಳ್ಳಿ (ರಂಕಾ ಕಾಲೋನಿ) ಜಂಕ್ಷನ್ ವರೆಗೆ ಎಲ್ಲಾ ರೀತಿಯ ಭಾರೀ ಸರಕು ಸಾಗಾಣಿಕೆ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿರುತ್ತದೆ.
2. ದೇವರ ಚಿಕ್ಕನಹಳ್ಳಿ ರಸ್ತೆ (ರಂಕಾ ಕಾಲೋನಿ) ಜಂಕ್ಷನ್‌ನಿಂದ ಬೇಗೂರು ರಸ್ತೆಯಲ್ಲಿ ಹೊಸೂರು ಮುಖ್ಯ ರಸ್ತೆ ಮತ್ತು ಬೇಗೂರು ಮುಖ್ಯ ರಸ್ತೆ ಜಂಕ್ಷನ್ ವರೆಗೆ ಎಲ್ಲಾ ರೀತಿಯ ಭಾರೀ ವಾಹನ ಸರಕು ಸಾಗಾಣಿಕೆ ವಾಹನಗಳ ಸಂಚಾರವನ್ನು ಮೇಲಿನ ವೇಳೆಗಳಲ್ಲಿ ನಿಷೇಧಿಸಲಾಗಿರುತ್ತದೆ.
3. ಬೇಗೂರು ಮುಖ್ಯ ರಸ್ತೆ ಮತ್ತು ಹೊಸೂರು ಮುಖ್ಯ ರಸ್ತೆ ಜಂಕ್ಷನ್‌ನಿಂದ ದೇವರಚಿಕ್ಕನಹಳ್ಳಿ ರಸ್ತೆಯ ಜಂಕ್ಷನ್ ವರೆಗೆ ರಸ್ತೆಯ ಇಕ್ಕೆಲಗಳಲ್ಲೂ ಎಲ್ಲಾ ರೀತಿಯ ವಾಹನ ನಿಲುಗಡೆಯನ್ನು ಸಂಪೂರ್ಣವಾಗಿ ನಿಷೇಧಿಸಲಾಗಿರುತ್ತದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಆದೇಶ ನೀಡಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:20.02.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:20.02.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

ಪಿ.ಆರ್.255

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1 ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ:05/ಸಂ.ವಿ/ಸಿ.ಓ.ಪಿ/2004, ಬೆಂಗಳೂರು, ದಿನಾಂಕ:13ನೇ ಫೆಬ್ರವರಿ, 2004**

ಬೆಂಗಳೂರು ನಗರ ಕೇಂದ್ರ ಸಂಚಾರ ಉಪ ವಿಭಾಗದ ವ್ಯಾಪ್ತಿಯಲ್ಲಿ ಬರುವ ಸೆಂಟ್ ಮಾರ್ಕ್ಸ್ ರಸ್ತೆಯಲ್ಲಿರುವ ಪಾಪಣ್ಣ ಬೀದಿಯು 25 ಅಡಿ ಅಗಲ ಹಾಗೂ ಸುಮಾರು 350 ಅಡಿ ಉದ್ದವಿದ್ದು ಪೂರ್ವ ಪಶ್ಚಿಮಾಭಿಮುಖವಾಗಿರುತ್ತದೆ. ಪಾಪಣ್ಣ ಬೀದಿಯು ಅತಿ ಚಿಕ್ಕದಾಗಿದ್ದು ಇತ್ತೀಚಿಗೆ ಪಾಪಣ್ಣ ಬೀದಿಯ ರಸ್ತೆಯ ಎರಡು ಕಡೆ ವಾಹನಗಳು ನಿಂತು ಇತರೆ ವಾಹನಗಳ ಸಂಚಾರಕ್ಕೆ ಹಾಗೂ ಪಾದಚಾರಿಗಳ ಓಡಾಟಕ್ಕೆ ಅಡ್ಡಿ ಉಂಟಾಗುತ್ತಿರುವುದು ಕಂಡು ಬಂದಿರುತ್ತದೆ.

ಆದ್ದರಿಂದ ಸಾರ್ವಜನಿಕರ ಹಿತದೃಷ್ಟಿಯಿಂದ ಮತ್ತು ಸುಗಮ ಸಂಚಾರದ ಸಲುವಾಗಿ ಸೆಂಟ್ ಮಾರ್ಕ್ಸ್ ರಸ್ತೆಯಲ್ಲಿರುವ ಪಾಪಣ್ಣ ಬೀದಿಯಲ್ಲಿ ರಸ್ತೆಯ ಎರಡು ಕಡೆ ಎಲ್ಲಾ ರೀತಿಯ ವಾಹನಗಳ ನಿಲುಗಡೆಯನ್ನು ನಿಷೇಧಿಸುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ಸಂಚಾರ ನಿಬಂಧನೆಗಳನ್ನು ಆದೇಶಿಸಿರುತ್ತೇನೆ.

**"ಸೆಂಟ್ ಮಾರ್ಕ್ಸ್ ರಸ್ತೆಯ ಪಾಪಣ್ಣ ಬೀದಿಯಲ್ಲಿ ಎರಡು ಕಡೆ ಎಲ್ಲಾ ರೀತಿಯ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ."**

ಈ ಆದೇಶವನ್ನು ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಆದೇಶ ನೀಡಿರುತ್ತೇನೆ. ಈ ಆದೇಶವು ದಿನದ 24 ಗಂಟೆಗಳು ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:13.02.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

ಪಿ.ಆರ್.256

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಮಂಡ್ಯ ಉಪವಿಭಾಗ-2, ಮಂಡ್ಯ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ: 26:2003**

| **ಅರ್ಜಿದಾರರು:** | ವಿರುದ್ಧ | **ಪ್ರತಿವಾದಿಗಳು:** |
|---|---|---|
| 1. ಶ್ರೀಮತಿ ಗೀತ ಕೋಂ ಲೇಟ್ ರವೀಶ್ | | 1. ರಮೇಶ್, ಮಾಲೀಕರು, ಶೃತಿ ಎಲೆಕ್ಟ್ರಿಕಲ್ಸ್, ಕೊಪ್ಪ ವಿಲೇಜ್, ಕೊಪ್ಪ ಹೋಬಳಿ ಮಂಡ್ಯ ಜಿಲ್ಲೆ. |
| 2. ಪ್ರೀತಿ ಬಿನ್ ಲೇಟ್ ರವೀಶ್ | | |

3. ಪ್ರಿಯಾ ಬಿನ್ ಲೇಟ್ ರವೀಶ್
4. ಪುಟ್ಟತಾಯಮ್ಮ
ಆನೆದೊಡ್ಡಿ ವಿಲೇಜ್ ವಾಸ ಕೊಪ್ಪ ಹೋಬಳಿ,
ಮದ್ದೂರು ತಾ. ಮಂಡ್ಯ ಜಿಲ್ಲೆ.

2. ದಿ ಎಕ್ಸಿಕ್ಯೂಟೀವ್ ಇಂಜಿನಿಯರ್ (ಎಲೆಕ್ಟ್ರಿಕ್) ಸೆಂಟ್ರಲ್ ಸ್ಟ್ರೀಟ್ ಡಿವಿಜನ್, ಕೆಪಿಟಿಸಿಎಲ್ (ಕೆಇಬಿ),
ಬೆಂಗಳೂರು-10

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ: ಗೀತ ಕೋಂ ಲೇಟ್ ರವೀಶ್ ಅವರು ತಮ್ಮ ಗಂಡ ಶ್ರೀ ರವೀಶ್ ಅವರು ಒಂದನೇ ಪ್ರತಿವಾದಿ ಶ್ರೀ ರಮೇಶ್ ರವರ ಬಳಿ ಚಾಲಕ: ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:13.02.2004 ರಂದು ನೀಡಲಾಗಿದೆ.

**ಬಿ. ಗೋವಿಂದಪ್ಪ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ-571 401.

ಪಿ.ಆರ್.257

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ,**
**ಮಂಡ್ಯ ಉಪವಿಭಾಗ-2, ಮಂಡ್ಯ**
**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:51:2003**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಶ್ರೀಮತಿ ಸರೋಜಮ್ಮ
ಕೋಂ ಲೇಟ್ ಸಿದ್ದಯ್ಯ,
ಮುದ್ದೆಗೌಡನಕೊಪ್ಪಲು,
ಪಾಲಗ್ರಹ ಪೋಸ್ಟ್, ನಾಗಮಂಗಲ ತಾ: ಮಂಡ್ಯ ಜಿಲ್ಲೆ.

1. ಅಸಿಸ್ಟೆಂಟ್ ಎಕ್ಸಿಕ್ಯೂಟೀವ್ ಇಂಜಿನಿಯರ್
ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಸಬ್ ಡಿವಿಜನ್,
ನಾಗಮಂಗಲ ತಾಲ್ಲೂಕು, ನಾಗಮಂಗಲ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಸರೋಜಮ್ಮ ಅವರು ತಮ್ಮ ಗಂಡ ಶ್ರೀ ಸಿದ್ದಯ್ಯ ಅವರು ಒಂದನೇ ಪ್ರತಿವಾದಿ ಶ್ರೀ:ಶ್ರೀಮತಿ ಅಸಿಸ್ಟೆಂಟ್ ಎಕ್ಸಿಕ್ಯೂಟೀವ್ ಇಂಜಿನಿಯರ್ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ:23.12.1986 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:13.02.2004 ರಂದು ನೀಡಲಾಗಿದೆ.

**ಬಿ. ಗೋವಿಂದಪ್ಪ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ-571 401.

ಪಿ.ಆರ್.258

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ,**
**ಮಂಡ್ಯ ಉಪವಿಭಾಗ-2, ಮಂಡ್ಯ**
**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:25:2003**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಶ್ರೀಮತಿ ಹೇಮಲತ ಕೋಂ ಲೇಟ್ ರಮೇಶ್
2. ಪ್ರೀತಿ ಬಿನ್ ಲೇಟ್ ರಮೇಶ್
3. ಪ್ರಜ್ವಲ್ ಬಿನ್ ಲೇಟ್ ರಮೇಶ್
4. ಪುಟ್ಟತಾಯಮ್ಮ ಕೋಂ ಮುಂದಗೌಡ
   ಚಿನ್ನನದೊಡ್ಡಿ ವಿಲೇಜ್ ವಾಸ:
   ಅತಗೂರು ಹೋಬಳಿ, ಮದ್ದೂರು ತಾಲ್ಲೂಕು,
   ಮಂಡ್ಯ ಜಿಲ್ಲೆ.

ಪ್ರತಿವಾದಿಗಳು:

1. ಶಿವಾನಂದ ಬಿನ್ ಬಸಪ್ಪ,
   6ನೇ ಕ್ರಾಸ್ ಸರ್ ಎಂ.ವಿ. ನಗರ, ಮದ್ದೂರು ಟೌನ್
2. ಎಕ್ಸಿಕ್ಯೂಟಿವ್ ಇಂಜಿನಿಯರ್ ಸೆಂಟ್ರಲ್ ಸ್ಟ್ರೀಟ್ ಡಿವಿಜನ್,
   ಕೆಪಿಟಿಸಿಎಲ್ (ಕೆಇಬಿ) ಬೆಂಗಳೂರು-10.
3. ದಿ ಬ್ರಾಂಚ್ ಮ್ಯಾನೇಜರ್,
   ಕೆ.ಜಿ.ಐ.ಡಿ. ಮಂಡ್ಯ ಬ್ರಾಂಚ್, ಮಂಡ್ಯ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಹೇಮಲತ ಅವರು ತಮ್ಮ ಗಂಡ ಶ್ರೀ ರಮೇಶ್ ಅವರು ಒಂದನೇ ಪ್ರತಿವಾದಿ ಶ್ರೀ ಶಿವಾನಂದ ಬಿನ್ ಬಸಪ್ಪ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:13.02.2004 ರಂದು ನೀಡಲಾಗಿದೆ.

**ಬಿ. ಗೋವಿಂದಪ್ಪ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ-571 401.

ಪಿ.ಆರ್.259

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ**
**ಅಧಿಭಾರ ಅರ್ಜಿ ಸಂಖ್ಯೆ:2:03-04**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಸಿಂಗನಮನೆ, ಭದ್ರಾವತಿ ತಾ: ಇದರ ಪರವಾಗಿ ವ್ಯವಸ್ಥಾಪಕರು.

ಪ್ರತಿವಾದಿಗಳು:

1. ಶ್ರೀ ಎಸ್. ಬಸವರಾಜ್ (ಮೃತ)
   ಮಾಜಿ ವ್ಯವಸ್ಥಾಪಕರು, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಸಿಂಗನಮನೆ, ಭದ್ರಾವತಿ ತಾಲ್ಲೂಕು.
   **ಮೃತ ವಾರಸುದಾರರು**
2. ಶ್ರೀಮತಿ ಶಾರದಮ್ಮ
   ಕೋಂ ಲೇಟ್ ಎಸ್. ಬಸವರಾಜ್, ಸಿಂಗನಮನೆ,
   ಭದ್ರಾವತಿ ತಾಲ್ಲೂಕು.
3. ಕುಮಾರ್ ಬಿ.
   ಬಿನ್ ಲೇಟ್ ಎಸ್. ಬಸವರಾಜ್, ಸಿಂಗನಮನೆ,
   ಭದ್ರಾವತಿ ತಾಲ್ಲೂಕು.

(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತಿ ಆಜ್ಞೆ)

**ಪ್ರಸ್ತಾವನೆ:**

ಅರ್ಜಿದಾರರ ಬ್ಯಾಂಕು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 2000-01 ಮತ್ತು 2001-02ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ.1011804-25ಗಳ ದುರುಪಯೋಗದ ವಸೂಲಿ ಬಗ್ಗೆ ಎದುರುದಾರರ ಮೇಲೆ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು, ಈ ಸಂಬಂಧವಾಗಿ ದಿನಾಂಕ:28.08.2003 ದಂದು ಅರ್ಜಿದಾರರು ನೀಡಿದ ಪ್ರಮಾಣಪತ್ರದಲ್ಲಿ ಅರ್ಜಿದಾರರ ಬ್ಯಾಂಕ್ ಎದುರು ಅರ್ಜಿದಾರರ ವಿರುದ್ಧ ನಗದು, ದಾಸ್ತಾನು ದುರುಪಯೋಗದ ಬಾಬ್ತು ಕಾಯ್ದೆ ಕಲಂ 69(1)ರ ಅಡಿಯಲ್ಲಿ ಅರ್ಜಿದಾರರ ಬ್ಯಾಂಕಿನ ಪರವಾಗಿ ಡಿಕ್ರಿ ಕೋರಿ ಪ್ರಕರಣ

ದಾಖಲಿಸಿದ್ದು, ಶ್ರೀ ಎಸ್. ಬಸವರಾಜ್ ಪೌತಿ ಹಾಗೂ ಪೌತಿ ವಾರಸುದಾರರುಗಳಾದ ಶ್ರೀಮತಿ ಶಾರದಮ್ಮ ಕೋಂ ಲೇಟ್ ಎಸ್. ಬಸವರಾಜ್ ಹಾಗೂ ಕುಮಾರ್ ಬಿ., ಬಿನ್ ಲೇಟ್ ಎಸ್. ಬಸವರಾಜ್ ರವರುಗಳಿಗೆ ಸೇರಿದ ಹಾಗೂ ಎದುರು ಅರ್ಜಿದಾರರುಗಳಿಗೆ ಸೇರಿದ ಪಿತ್ರಾರ್ಜಿತ ಷೆಡ್ಯೂಲ್ ಸ್ವತ್ತನ್ನು ಪರಭಾರೆ: ಮಾರಾಟ ಮಾಡಲು ತಯಾರಿ ನಡೆಸುತ್ತಿರುವುದಾಗಿ ತಿಳಿದು ಬಂದಿದೆ. ಹಾಗೇನಾದರೂ ಎದುರು ಅರ್ಜಿದಾರರುಗಳು ಷೆಡ್ಯೂಲ್ ಸ್ವತ್ತನ್ನು ಮಾರಾಟ: ಪರಭಾರೆ ಮಾಡಿದ್ದು, ಅದರಲ್ಲಿ ದುರುಪಯೋಗದ ಹಣ ವಸೂಲಾತಿ ಆಗದೇ ಇರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಅರ್ಜಿದಾರ ಬ್ಯಾಂಕ್ ಘನ ನ್ಯಾಯಾಲಯದಲ್ಲಿ ಎದುರು ಅರ್ಜಿದಾರರ ವಾರಸುದಾರರ ಹೆಸರಿನಲ್ಲಿರುವ ಆಸ್ತಿಗಳನ್ನು ಆದೇಶಕ್ಕಿಂತ ಪೂರ್ವದಲ್ಲಿ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಕ್ರಮವನ್ನು ಈ ದಾವೆಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಮಾಡುವ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವಕ ಜಪ್ತಿ ಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಸನಿಶಿ24:ಎಬಿಎನ್:ಕಲಂ 103:03-04, ದಿನಾಂಕ:5ನೇ ಮಾರ್ಚ್, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್) ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಅಧಿಭಾರ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತಿಗೊಳಿಸಲಾಗಿದೆಯೆಂದು ಆದೇಶಿಸಿದೆ.

ಅಲ್ಲದೇ ಎದುರು ಅರ್ಜಿದಾರರುಗಳು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತಿ ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ)ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ, ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪ್ರತಿಯನ್ನು ದಿನಾಂಕ:19.03.2004ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತಿ ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲವಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತಿ ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಷರತ್ತು ಪೂರ್ವಕ ಜಪ್ತಿ ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ ಷೆಡ್ಯೂಲ್**

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ:ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1 | 2 | 3 | 4 | 5 | 6 |
| 1. | ಬಸವರಾಜ್, ಬಿನ್ ಸಂಗಯ್ಯ | ಸಿಂಗನಮನೆ, ಭದ್ರಾವತಿ ಕಸಬಾ | ಸರ್ವೆ ನಂ.16 ಖಾತೆ ನಂ.153 ಎಂಆರ್9:91-92 | 0.27 ಗುಂಟೆ | ಜಮೀನು |
| 2. | ಶ್ರೀಮತಿ ಶಾರದಮ್ಮ ಕೋಂ ಲೇಟ್ ಬಸವರಾಜ್ | ಸಿಂಗನಮನೆ, ಭದ್ರಾವತಿ ಕಸಬಾ | ಖಾತೆ ನಂ.94 | 50 x 30 ಅಡಿಗಳು | ಆರ್‌ಸಿಸಿ ಮನೆ |

**ಇದಕ್ಕೆ ಚೆಕ್‌ಬಂದಿ**

**ಪೂರ್ವ:** ಸರ್ವೆ ನಂ.93
**ಪಶ್ಚಿಮ:** ಸರ್ವೆ ನಂ.95
**ಉತ್ತರ:** ರಸ್ತೆ
**ದಕ್ಷಿಣ:** ರಸ್ತೆ

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ:ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 3. | ಸಂಗಯ್ಯ ಬಿನ್ ಚಂದ್ರಯ್ಯ | ಕಡೂರು ತಾಲ್ಲೂಕು ಕಸಬಾ ಹೋಬಳಿ ಕಡೂರಹಳ್ಳಿ | ಸರ್ವೆ ನಂ.117:2 ಆರ್.ಆರ್. ನಂ. 973 | 1.5 ಎಕರೆ ಗುಂಟೆ | ಖುಷ್ಕಿ |
| 4. | 1) ಚಂದ್ರಯ್ಯ, ಬಿನ್ ಕಲ್ಮಂಡಿ ಬಸವರಾಜ್ 2) ಈಶ್ವರಯ್ಯ ಬಿನ್ ಮರುಳಯ್ಯ 3) ರಾಜಶೇಖರಯ್ಯ, ಬಿನ್ ಜಯಣ್ಣ | ಕಡೂರು ತಾಲ್ಲೂಕು ಕಸಬಾ ಹೋಬಳಿ ಕಡೂರಹಳ್ಳಿ | ಸರ್ವೆ ನಂ. 121:1ಪಿ1 | 3.10 ಎಕರೆ ಗುಂಟೆ | ಖುಷ್ಕಿ |

| 1 | 2 | 3 | 4 | 5 | 6 |
|---|---|---|---|---|---|
| 5. | ಚಂದ್ರಪ್ಪ ಬಿನ್ ಕರಿಬಸವಯ್ಯ | ------"------- | 117:3 | 1.10 ಎಕರೆ ಗುಂಟೆ | ಖುಷ್ಕಿ |
| 6. | 1) ಚಂದ್ರಪ್ಪ, ಬಿನ್ ಕರಿಬಸಪ್ಪ 2) ರಾಜಶೇಖರ್, ಬಿನ್ ಚಿಕ್ಕಮರುಳಯ್ಯ 3) ಈಶ್ವರಯ್ಯ, ಬಿನ್ ಚಿಕ್ಕಮರುಳಯ್ಯ | ------"----- | 204:1 | 1.00 | ಜಮೀನು |
| 7. | 1) ಚಂದ್ರಪ್ಪ, ಬಿನ್ ಬಸವಯ್ಯ 2) ರಾಜಶೇಖರ್, ಬಿನ್ ಜಯಣ್ಣ 3) ಈಶ್ವರಯ್ಯ, ಬಿನ್ ಚಿಕ್ಕಮರುಳಯ್ಯ | ------"---- | 203:ಪಿ1 | 1.23 ಎಕರೆ ಗುಂಟೆ | ಖುಷ್ಕಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವ ಸಹಿಯೊಂದಿಗೆ ದಿನಾಂಕ:05.02.2004 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿ.ಆರ್.260

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1 ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ:09/ಸಂ.ವಿ/ಸಿ.ಓ.ಪಿ/2004, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ, 2004**

ಬೆಂಗಳೂರು ಮಹಾನಗರದ ಅಶೋಕನಗರ ಸಂಚಾರ ವಲಯದ ವ್ಯಾಪ್ತಿಯಲ್ಲಿ ಬರುವ ಡಿಸೋಜ ವೃತ್ತದ ಸುತ್ತಮುತ್ತ ಸಂಚಾರ ದಟ್ಟಣೆ ಅಧಿಕವಾಗಿದ್ದು ರಿಚ್‌ಮಂಡ್ ರಸ್ತೆ, ವಿಕ್ಟೋರಿಯ ರಸ್ತೆ, ಲೋಯರ್ ಅಗರಂ ರಸ್ತೆ ಮತ್ತು ಪಾಮ್‌ಗ್ರೂವ್ ರಸ್ತೆಗಳಲ್ಲಿನ ಸಂಚಾರ ದಟ್ಟಣೆಯನ್ನು ವ್ಯವಸ್ಥಿತವಾಗಿ ನಿಯಂತ್ರಿಸಲು ಹಾಗೂ ಕೆಲವು ಸಂಚಾರ ಮಾರ್ಪಾಡುಗಳನ್ನು ಮಾಡಿ ಸಂಚಾರವು ಸರಾಗವಾಗಿ ಚಲಿಸಲು ಸಹಾಯಕವಾಗುವಂತೆ ಮತ್ತು ಸಾರ್ವಜನಿಕರ ಸಂಚಾರದ ಹಿತದೃಷ್ಟಿಯಿಂದ ಈ ಕೆಳಕಂಡ ರಸ್ತೆಗಳಲ್ಲಿ ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸುವುದು ಅನಿವಾರ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ರಿಚ್‌ಮಂಡ್ ರಸ್ತೆ:** ಡಿಸೋಜ ವೃತ್ತದಿಂದ ಹಾಸ್ಮೆಟ್ ಜಂಕ್ಷನ್ ವರೆಗಿನ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಹಾಸ್ಮೆಟ್ ಜಂಕ್ಷನ್ ನಿಂದ ಡಿಸೋಜ ವೃತ್ತದವರೆಗೆ ಸಂಚಾರವನ್ನು ನಿಷೇಧಿಸಲಾಗಿದೆ.
2. **ಲೋಯರ್ ಅಗರಂ ರಸ್ತೆ:** ಹಾಸ್ಮೆಟ್ ಜಂಕ್ಷನ್‌ನಿಂದ ಇಂಡಿಯಾ ಗ್ಯಾರೇಜ್ ಜಂಕ್ಷನ್ ವರೆಗಿನ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಇಂಡಿಯಾ ಗ್ಯಾರೇಜ್ ಜಂಕ್ಷನ್ ನಿಂದ ಹಾಸ್ಮೆಟ್ ಜಂಕ್ಷನ್ ವರೆಗೆ ಸಂಚಾರವನ್ನು ನಿಷೇಧಿಸಲಾಗಿದೆ.
3. **ವಿಕ್ಟೋರಿಯಾ ರಸ್ತೆ:** ಲೋಯರ್ ಅಗರಂ ಜಂಕ್ಷನ್‌ನಿಂದ ಡಿಸೋಜ ವೃತ್ತದವರೆಗಿನ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು (ಇಂಡಿಯಾ ಗ್ಯಾರೇಜ್ ಜಂಕ್ಷನ್) ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಡಿಸೋಜ ವೃತ್ತದಿಂದ ಲೋಯರ್ ಅಗರಂ ಜಂಕ್ಷನ್‌ವರೆಗೆ ಸಂಚಾರವನ್ನು ನಿಷೇಧಿಸಲಾಗಿದೆ.
4. **ಪಾಮ್‌ಗ್ರೂವ್ ರಸ್ತೆ:** ಪಾಮ್‌ಗ್ರೂವ್ ರಸ್ತೆ ಜಂಕ್ಷನ್‌ನಿಂದ (ವಿಕ್ಟೋರಿಯ ರಸ್ತೆ ಜಂಕ್ಷನ್) ಹಾಸ್ಮೆಟ್ ಜಂಕ್ಷನ್‌ವರೆಗಿನ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಹಾಸ್ಮೆಟ್ ಜಂಕ್ಷನ್‌ನಿಂದ ಪಾಮ್‌ಗ್ರೂವ್ ರಸ್ತೆ ಜಂಕ್ಷನ್ ವರೆಗೆ ಸಂಚಾರವನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:29.02.2004 ರಿಂದ ಪ್ರಾಯೋಗಿಕವಾಗಿ ಒಂದು ತಿಂಗಳ ಕಾಲ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:16.02.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

ಪಿ.ಆರ್.261

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ರವರ ನ್ಯಾಯಾಲಯ

**ಸಂಖ್ಯೆ:ಎ8.71(ಎ):ಸಿಆರ್:1/03-04, ದಿನಾಂಕ: 11ನೇ ಫೆಬ್ರವರಿ, 2004**

**ಸಾರ್ವಜನಿಕ ಪ್ರಕಟಣೆ**

ತುಮಕೂರು ಅರಣ್ಯ ವಿಭಾಗ ವ್ಯಾಪ್ತಿಯ ಲಿಂಗಾಪುರ ಗ್ರಾಮದ ಹತ್ತಿರ ಫಿಯಟ್ ಕಾರು (premier padmini) No.DHD 8409ರಲ್ಲಿ ಅಕ್ರಮವಾಗಿ ಶ್ರೀಗಂಧ ಸಾಗಾಣಿಕೆ ಮಾಡುತ್ತಿದ್ದಾಗ ಅತೀ ವೇಗವಾಗಿ ಓಡಿಸಿ ಮರಕ್ಕೆ ಡಿಕ್ಕಿ ಹೊಡೆದು ಜಕಂಗೊಂಡಿದ್ದು, ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ತುಮಕೂರು ರವರು ಮಾಲು ಸಮೇತ ಮೊಕದ್ದಮೆ ದಾಖಲಿಸಿ ಅಮಾನತ್ತು ಪಡಿಸಿರುತ್ತಾರೆ. ಸದರಿ ವಾಹನದ ಮಾಲೀಕರು ಯಾರೂ ಸಹ ಈವರೆಗೆ ವಾಹನ ಮಾಲೀಕತ್ವದ ಬಗ್ಗೆ ಈ ನ್ಯಾಯಾಲಯವನ್ನು ಸಂಪರ್ಕಿಸಿರುವುದಿಲ್ಲ. ಈ ವಾಹನದ ಮಾಲೀಕರು ಅಥವಾ ವಾರಸುದಾರರು ಯಾರಾದರೂ ಇದ್ದಲ್ಲಿ ಅಥವಾ ತಕರಾರು ಸಮಜಾಯಿಸಿ ಏನಾದರೂ ಇದ್ದಲ್ಲಿ ಈ ಪ್ರಕಟಣೆ ಹೊರಡಿಸಿದ 30 ದಿನಗಳ ಒಳಗೆ ಸಂಬಂಧಿಸಿದ ದಾಖಲೆಗಳ ಸಹಿತ ಈ ಕೆಳಕಂಡವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು. ತಪ್ಪಿದಲ್ಲಿ ಈ ವಾಹನದ ಮಾಲೀಕರು/ ವಾರಸುದಾರರು ಯಾರೂ ಇಲ್ಲವೆಂದು ಹಾಗೂ ಅರಣ್ಯ ಅಪರಾಧದಲ್ಲಿ ಭಾಗಿಯಾಗಿ, ಅನಧಿಕೃತವಾಗಿ ಅರಣ್ಯ ಉತ್ಪನ್ನ ಸಾಗಿಸಲು ಉಪಯೋಗಿಸಲಾಗಿದೆಯೆಂದು ಪರಿಗಣಿಸಿ ಏಕ ಪಕ್ಷೀಯವಾಗಿ ತೀರ್ಮಾನ ತೆಗೆದುಕೊಂಡು ಕರ್ನಾಟಕ ಅರಣ್ಯ ನಿಯಮ 1963ರ ಸೆಕ್ಷನ್ 71(ಎ) ರೀತ್ಯಾ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

| ಕ್ರಮ ಸಂಖ್ಯೆ | ಸ್ಥಳ/ ದಿನಾಂಕ | ವಶಪಡಿಸಿಕೊಂಡ ವಾಹನ ಸಂಖ್ಯೆ ಹಾಗೂ ಪ್ರಮಾಣ | ವಶಪಡಿಸಿಕೊಂಡ ವಾಹನ ಸಂಖ್ಯೆ ಹಾಗೂ ಮಾದರಿ | ಪತ್ತೆ ಹಚ್ಚಿದ ಅಧಿಕಾರಿಗಳು | ಅಪರಾಧದ ಸಂಖ್ಯೆ |
|---|---|---|---|---|---|
| 1. | ತುಮಕೂರು ತಾ:ಕಸಬಾ ಹೋಬಳಿ ಲಿಂಗಾಪುರ ಗ್ರಾಮದ ಹತ್ತಿರ | 41ಕೆ.ಜಿ. ಶ್ರೀಗಂಧದ ಬೇರು ಹಾಗೂ ಚಕ್ಕೆ | DHD-8409 ಫಿಯಟ್ ಕಾರು (premier Padmini) | ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ತುಮಕೂರು | crime No. 2/2001 |

ಪ್ರಾಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ತುಮಕೂರು ವಿಭಾಗ, ತುಮಕೂರು.

ಪಿ.ಆರ್.262

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ:ಕಾಪಕಾ:ಎಫ್:ಎಸ್ಆರ್-101:2001**

**ಅರ್ಜಿದಾರರು:**

1. ಶ್ರೀಮತಿ ಪುಟ್ಟರಾಜಮ್ಮ ಕೋಂ ವೀರಭದ್ರಪ್ಪ, 38 ವರ್ಷ, ಮಚ್ಚಿನ ಮನೆ ಬಿಕ್ಕೋಡು ಹೋಬಳಿ ಮತ್ತು ಅಂಚೆ, ಬೇಲೂರು ತಾಲ್ಲೂಕು.
2. ಶ್ರೀ ವೀರಭದ್ರಪ್ಪ ಬಿನ್ ರೇವಣ್ಣ, ಯಲಗುಂದ ಅಂಚೆ, ಸಾಲಗಾಮೆ ಹೋಬಳಿ, ಹಾಸನ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಬಿ.ಎಸ್. ಈಶ್ವರಪ್ಪ ಬಿನ್ ಸಿದ್ದಪ್ಪಶೆಟ್ಟಿ, ಮಚ್ಚಿನಮನೆ ಗ್ರಾಮ, ಬಿಕ್ಕೋಡು ಹೋಬಳಿ ಮತ್ತು ಅಂಚೆ, ಬೇಲೂರು ತಾಲ್ಲೂಕು
2. ದಿ ಡಿವಿಜನಲ್ ಮ್ಯಾನೇಜರ್, ಓರಿಯಂಟಲ್ ಇನ್ಶ್ಯೂರೆನ್ಸ್ ಕಂ.ಲಿ., ವೆಂಕಟೇಶ್ವರ ಬಿಲ್ಡಿಂಗ್, ಪಿ.ಬಿ. ನಂ. 64, ಗಾಂಧಿಬಜಾರ್ ಸರ್ಕಲ್, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಕುಮಾರಸ್ವಾಮಿ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:19.04.98 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್.263

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ:ಕಾಪಕಾ:ಎಫ್:ಎಸ್‌ಆರ್-29:2003**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಶ್ರೀ ಗುಡ್ಡಪ್ಪಗೌಡ ಅಲಿಯಾಸ್ ಗುಂಡಪ್ಪಗೌಡ ಬಿನ್ ಲೇಟ್ ಶೇಷಪ್ಪಗೌಡ, 65 ವರ್ಷ
2. ಶ್ರೀಮತಿ ಮೋಹಿನಿ ಕೋಂ ಶ್ರೀ ಗುಡ್ಡಪ್ಪಗೌಡ ಅಟ್ಟಿಹಳ್ಳಿ ವಿಲೇಜ್, ಹೆತ್ತೂರು ಹೋಬಳಿ, ಸಕಲೇಶಪುರ ತಾಲ್ಲೂಕು.

ಪ್ರತಿವಾದಿಗಳು:

1. ಶ್ರೀ ಎಸ್.ಡಿ. ಸತೀಶ್ ಬಿನ್ ದೇವಪ್ಪಗೌಡ, ತಿರುಮಲ ಟ್ರಾನ್ಸ್‌ಪೋರ್ಟ್, ಓಲ್ಡ್ ಮಾರ್ಕೆಟ್ ರೋಡ್, ಸಕಲೇಶಪುರ.
2. ಮೆ: ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಹೇಮಾ ಮ್ಯಾನ್‌ಸನ್ ಗಾಂಧಿ ಬಜಾರ್, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ನಾಗೇಶ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:24.12.1982 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್.264

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ:ಕಾಪಕಾ:ಎಫ್:ಎಸ್‌ಆರ್-27:2003**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಕಾವ್ಯ ಉರುಫ್ ಕಲ್ಯಾಣಿ ಕೋಂ ಹೆಚ್.ಆರ್. ರಂಗಸ್ವಾಮಿ, 25 ವರ್ಷ
2. ಆಕಾಶ್ ಹೆಚ್.ಆರ್. ಬಿನ್ ಹೆಚ್.ಆರ್. ರಂಗಸ್ವಾಮಿ, 5 ವರ್ಷ
3. ಹೆಚ್.ಆರ್. ಐಶ್ವರ್ಯ ಬಿನ್ ಹೆಚ್.ಆರ್. ರಂಗಸ್ವಾಮಿ, 3 ವರ್ಷ
4. ರಾಮೇಗೌಡ ಬಿನ್ ನಂಜೇಗೌಡ, 56 ವರ್ಷ
5. ಯಶೋಧಮ್ಮ ಕೋಂ ರಾಮೇಗೌಡ, 53 ವರ್ಷ ಹೆತ್ತಗೋಡನಹಳ್ಳಿ, ಕಸಬಾ ಹೋಬಳಿ, ಅರಕಲಗೂಡು ತಾಲ್ಲೂಕು.

ಪ್ರತಿವಾದಿಗಳು:

1. ಶ್ರೀಮತಿ ಪ್ರಭಾಗುಪ್ತ ಕೋಂ ಗುಪ್ತಾ, ನಂ.101, ಮೊದಲನೇ ಮಹಡಿ, ಕೋಟೆ ಮನ್ನಾರ, 19ನೇ ಮುಖ್ಯ ರಸ್ತೆ, 3ನೇ ಅಡ್ಡರಸ್ತೆ, 2ನೇ ಹಂತ, ಜೆ.ಪಿ. ನಗರ, ಬೆಂಗಳೂರು76
2. ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂಪನಿ ನಿಯಮಿತ, ಶಾಖಾ ಕಛೇರಿ ನಂ.1, ನಂ.2, ಮೊದಲನೇ ಮಹಡಿ, ಹೊಸೂರು ಮುಖ್ಯ ರಸ್ತೆ, ಮಡಿವಾಳ, ಬೆಂಗಳೂರು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಹೆಚ್.ಆರ್. ರಂಗಸ್ವಾಮಿ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:03.05.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್.265

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ:ಕಾಪಕಾ:ಎಫ್:ಎಸ್‌ಆರ್-31:2003**

**ಅರ್ಜಿದಾರರು:** **ವಿರುದ್ಧ**

1. ಮಹಮ್ಮದ್ ಖಾಸಿಂ ಬಿನ್ ಲೇಟ್ ಯಾಕುಬ್‌ಸಾಬ್, 70 ವರ್ಷ
2. ನೂರ್‌ಜಾನ್ ಕೋಂ ಮಹಮದ್ ಕಾಸಿಮ್, 60 ವರ್ಷ ವಾಸ: ಈಶ್ವರ ದೇವಸ್ಥಾನದ ಹಿಂಭಾಗ, ರಿವರ್ ಬ್ಯಾಂಕ್ ರಸ್ತೆ, ಹೊಳೆನರಸೀಪುರ ಟೌನ್.

**ಪ್ರತಿವಾದಿಗಳು:**

1. ಸಲೀಂ ಬಿನ್ ಮಹಮ್ಮದ್ ಷರೀಫ್, ಕೆಎ 18, 329ರ ಲಾರಿ ಮಾಲೀಕರು, ಪೀರ್ ಮೊಹಲ್ಲಾ, ಹೊಳೆನರಸೀಪುರ ಟೌನ್, ಹಾಸನ ಜಿಲ್ಲೆ.
2. ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ಬ್ರಾಂಚ್ ಆಫೀಸ್, ಜಯದೇವ ಹಾಸ್ಪೆಲ್ ಬಿಲ್ಡಿಂಗ್, ಬಿ.ಹೆಚ್. ರಸ್ತೆ, ತಿಪಟೂರು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸಲ್ಲು ಉರುಫ್ ಸಲೀಂರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:02.01.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್.266

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ:ಕಾಪಕಾ:ಎಫ್:ಎಸ್‌ಆರ್-30:2003**

**ಅರ್ಜಿದಾರರು:** **ವಿರುದ್ಧ**

1. ಶ್ರೀಮತಿ ಶಾರದಮ್ಮ ಕೋಂ ಕೆಂಪೇಗೌಡ ಉರುಫ್ ಪುಟ್ಟಸ್ವಾಮಿ, 40 ವರ್ಷ
2. ಗಿರೀಶ್ ಬಿನ್ ಕೆಂಪೇಗೌಡ ಉರುಫ್ ಪುಟ್ಟಸ್ವಾಮಿ, 17 ವರ್ಷ
3. ದಿವ್ಯ ಬಿನ್ ಕೆಂಪೇಗೌಡ ಉರುಫ್ ಪುಟ್ಟಸ್ವಾಮಿ, 13 ವರ್ಷ
4. ಅನ್ನಪೂರ್ಣ ಬಿನ್ ಕೆಂಪೇಗೌಡ ಉರುಫ್ ಪುಟ್ಟಸ್ವಾಮಿ, 5 ವರ್ಷ
5. ನಂಜೇಗೌಡ
6. ಶ್ರೀಮತಿ ದೊಡ್ಡಮ್ಮ ಕೋಂ ನಂಜೇಗೌಡ ಹೆಚ್ ಹೊಸಳ್ಳಿ ಗ್ರಾಮ, ದುದ್ದ ಹೋಬಳಿ, ಹಾಸನ ತಾಲ್ಲೂಕು ಮತ್ತು ಜಿಲ್ಲೆ.

**ಪ್ರತಿವಾದಿಗಳು:**

1. ಶ್ರೀ ಡಿ.ಸಿ. ಪ್ರಕಾಶ್ ಬಿನ್ ಚನ್ನೇಗೌಡ, ದೊಡ್ಡಬಸವನಹಳ್ಳಿ ಗ್ರಾಮ, ಹೊಸಕೊಪ್ಪಲು ಅಂಚೆ, ಹಾಸನ ತಾಲ್ಲೂಕು ಮತ್ತು ಜಿಲ್ಲೆ.
2. ದಿ ನ್ಯೂ ಇಂಡಿಯಾ ಇನ್‌ಶ್ಯೂರೆನ್ಸ್ ಕಂ.ಲಿ, ಬ್ರಾಂಚ್ ಆಫೀಸ್, ಹೇಮಾ ಮ್ಯಾನ್‌ಸನ್, 2ನೇ ಮಹಡಿ, ಗಾಂಧಿ ಬಜಾರ್, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಕೆಂಪೇಗೌಡ ಉರುಫ್ ಪುಟ್ಟಸ್ವಾಮಿ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:21.07.2002 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್.267

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ:ಕಾಪಕಾ:ಎಫ್:ಎಸ್ಆರ್-3:2003**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಶ್ರೀಮತಿ ಲಲಿತ ಕೋಂ ಲೇಟ್ ದೇವರಾಜ್, ಸುಮಾರು 32 ವರ್ಷ
2. ಕುಮಾರಿ ಶೃತಿ ಬಿನ್ ಲೇಟ್ ದೇವರಾಜ್, ಸುಮಾರು 13 ವರ್ಷ
3. ಮಾಸ್ಟರ್ ಸುನಿಲ್ ಬಿನ್ ಲೇಟ್ ದೇವರಾಜ್, ಸುಮಾರು 8 ವರ್ಷ
4. ಶ್ರೀಮತಿ ಲಕ್ಷ್ಮಮ್ಮ ಕೋಂ ಮರಿಗೌಡ, ಸುಮಾರು 70 ವರ್ಷ, ದೊಡ್ಡಕೋಡಿಹಳ್ಳಿ ಗ್ರಾಮ, ಹಳೇಬೀಡು ಹೋಬಳಿ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ.

ಪ್ರತಿವಾದಿಗಳು:

1. ಶ್ರೀ ಕೆ.ಆರ್. ವಿಶ್ವನಾಥ್ ಬಿನ್ ರಾಜಶೇಖರಪ್ಪ, ಕೆಎ-13-5932ರ ಮ್ಯಾಕ್ಸಿಕ್ಯಾಬ್ ವಾಹನದ ಮಾಲೀಕರು, ಕಾಜೀಗಟ್ಟ ಗ್ರಾಮ, ಬಾಣಾವರ ಹೋಬಳಿ, ಅರಸೀಕೆರೆ ತಾಲ್ಲೂಕು.
2. ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂಪನಿ, ವೆಂಕಟೇಶ್ವರ ಬಿಲ್ಡಿಂಗ್, ಬಿ.ಎಂ. ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ದೇವರಾಜ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:08.01.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್.268

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ನ್ಯಾಯಾಲಯ

**ಕಾರಣ ಕೇಳಿ ನೋಟೀಸ್**

**ವಿಷಯ:** ಅಕ್ರಮವಾಗಿ ಸಾಗುವಾನಿ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನ ಸಂಖ್ಯೆ: ಕೆಎ-27-3189 ಮಹೇಂದ್ರ ಮಿನಿ ಮ್ಯಾಕ್ಸಿಕ್ಯಾಬನ್ನು ವಶಕ್ಕೆ ತೆಗೆದುಕೊಂಡಿರುವ ಬಗ್ಗೆ.

**ಉಲ್ಲೇಖ:**
1. ಪೊಲೀಸ್ ಉಪನಿರೀಕ್ಷಕರು, ಅಪರಾಧ ವಿಭಾಗ, ಗ್ರಾಮಾಂತರ ಪೊಲೀಸ್ ಠಾಣೆ, ಚಿತ್ರದುರ್ಗ ಇವರ ಕಛೇರಿಯ ಅಪರಾದ ಸಂಖ್ಯೆ:193/03 ದಿನಾಂಕ:04.06.03
2. ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ ಇವರ ಪತ್ರ ಸಂಖ್ಯೆ:ವಅಅ-ಚಿದು-ಸಾಗುವಾನಿ-ವಶ-ಸಿಆರ್/2003-04/124 ದಿನಾಂಕ:07.08.2003
3. ಪ್ರಾದೇಶಿಕ ಸಾರಿಗೆ ಅಧಿಕಾರಿ, ಹಾವೇರಿ ಇವರು 'ಬಿ' ವಿವರ ನೀಡಿದ ಪತ್ರ ಸಂಖ್ಯೆ:ನೋಂದಣಿ-3ಎ-27/3/89/ಪ್ರಾಮಲಿ/ಹಾ/03-04 ದಿನಾಂಕ:11.08.03

ಪೊಲೀಸ್ ಉಪ ನಿರೀಕ್ಷಕರು ಅಪರಾಧ ವಿಭಾಗ, ಚಿತ್ರದುರ್ಗ ಇವರು ದಿನಾಂಕ:04.06.03 ರಂದು ಬೆಳಗ್ಗೆ 11.15 ಗಂಟೆಗೆ ಚಿತ್ರದುರ್ಗ ಸ್ವಾತಿ ಹೋಟೆಲ್ ಮುಂದೆ ಇರುವ ರಾಷ್ಟ್ರೀಯ ಹೆದ್ದಾರಿ 4ರಲ್ಲಿ ಗಸ್ತು ಮಾಡುತ್ತಿರುವಾಗ ಕೆಎ-27/3189 ಮಹೇಂದ್ರ ಮ್ಯಾಕ್ಸಿಕ್ಯಾಬ್ ನಲ್ಲಿ 9 ಸಾಗುವಾನಿ ಮರದ ತುಂಡುಗಳನ್ನು ಅಕ್ರಮವಾಗಿ ಆರೋಪಿಗಳು ಸಾಗಾಣಿಕೆ ಮಾಡುತ್ತಿದ್ದಾಗ, ಮ್ಯಾಕ್ಸಿಕ್ಯಾಬ್ ಮತ್ತು ಸಾಗುವಾನಿ ಮರದ ತುಂಡುಗಳನ್ನು ವಶಪಡಿಸಿಕೊಂಡು ಗ್ರಾಮಾಂತರ ಪೊಲೀಸ್ ಠಾಣೆ, ಚಿತ್ರದುರ್ಗರವರು ಗುನ್ಹೆ ಸಂಖ್ಯೆ:193/03ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆ ಕೈಗೊಂಡಿರುತ್ತಾರೆ. ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ 9 ಸಾಗುವಾನಿ ಮರದ ತುಂಡುಗಳನ್ನು ಹಾಗೂ ಸಾಗಿಸಲು ಉಪಯೋಗಿಸಿದ ಕೆಎ-27/3189 ಸಂಖ್ಯೆಯ ಮಹೇಂದ್ರ ಮ್ಯಾಕ್ಸಿಕ್ಯಾಬನ್ನು ಕರ್ನಾಟಕ ಅರಣ್ಯ ಕಾಯ್ದೆ-1963 ಕಲಂ 71 (ಎ)ರ ಪ್ರಕಾರ ವಿಲೇ ಮಾಡಲು ಹಾಗೂ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರಕ್ಕೆ ದಾಖಲೆಗಳೊಂದಿಗೆ ಮನವಿ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾವೇರಿ ಇವರಿಗೆ ಸದರಿ ವಾಹನದ ವಾರಸುದಾರರು ಯಾರೆಂಬ ಬಗ್ಗೆ ವರದಿ ಕೇಳಲಾಗಿ ಉಲ್ಲೇಖ (3)ರ ತಮ್ಮ ವರದಿಯಲ್ಲಿ ಮಹೇಂದ್ರ ಮ್ಯಾಕ್ಸಿಕ್ಯಾಬ್‌ನ ಮಾಲೀಕರು ಶ್ರೀ ಗಂಗಾಧರ ಶಂಕರಪ್ಪ ಬಿದರಣ್ಣವರ್ ಬಿನ್ ಶಂಕರಪ್ಪ (ವಾಹನದ ಚಾಲಕರು ಹಾಗೂ ಮಾಲೀಕರು) ಅಂಚಿಕಟ್ಟೆ ಗ್ರಾಮ, ಬೆಲಗಲ ಪೇಟೆ ಪೋಸ್ಟ್, ಹಾನಗಲ್ ತಾಲ್ಲೂಕು ಹಾವೇರಿ ಜಿಲ್ಲೆ ಇವರೆಂದು ವಿಳಾಸವನ್ನು ನೀಡಿದ ಪ್ರಯುಕ್ತ ಸರ್ಕಾರದ ಸ್ವತ್ತಾಗಿರುವ 9 ಸಾಗುವಾನಿ ಮರದ ತುಂಡುಗಳನ್ನು ಅಧಿಕೃತವಾಗಿ ಪರವಾನಿಗೆ ಇಲ್ಲದೆ ಸಾಗಾಣೆ ಮಾಡಿರುವುದರಿಂದ ಈ ಪ್ರಕರಣವು ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್ 71(ಎ)ರ ಪ್ರಕಾರ ಪರಿಗಣಿಸುವುದು ಸೂಕ್ತವೆಂದು ಸದರಿ 9 ಸಾಗುವಾನಿ ಮರದ ತುಂಡುಗಳನ್ನು ಅಕ್ರಮವಾಗಿ

